CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೧೯, ೨೦೦೪ (ಶ್ರಾವಣ ೨೮, ಶಕ ವರ್ಷ ೧೯೨೬) | ಸಂಚಿಕೆ ೩೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಶಿಕ್ಷಣ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ ಮಲ್ಲಸಂದ್ರದ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ ೧೯೯೩-೯೪ರಿಂದ ೧೯೯೮-೯೯ರವರೆಗೆ ಮಾನ್ಯತೆ ಆಗದೆ ಇದ್ದ ಅವಧಿಯಲ್ಲಿ ಅನುದಾನ ನೀಡಿದ; ಮತ್ತು ಅನುದಾನರಹಿತ ವಿಭಾಗಗಳ ಶಿಕ್ಷಕರಿಗೆ ಸಂಬಂಧಿಸಿದಂತೆ ೧೯೯೫-೨೦೦೧ರ ಅವಧಿಯಲ್ಲಿ ಅನುದಾನ ಬಿಡುಗಡೆ ಮಾಡಿ ವಂಚಿಸಿದ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಕ್ರಮ.

**ಓದಲಾಗಿದೆ:**
೧. ದಿನಾಂಕ:೧೩.೭.೨೦೦೪ರಸರ್ಕಾರಿ ಆದೇಶ ಸಂಖ್ಯೆ.ಇ ಡಿ ೯ ಡಿಜಿಡಿ ೨೦೦೩.
೨. ದಿನಾಂಕ:೧೩.೭.೨೦೦೪ರ ಸರ್ಕಾರಿ ಆದೇಶ ಸಂಖ್ಯೆ.ಇ ಡಿ ೯ ಡಿಜಿಡಿ ೨೦೦೩(I)

**ಪ್ರಸ್ತಾವನೆ:**

ಮೇಲೆ(೧)ರಲ್ಲಿ ಓದಲಾಗಿರುವ ದಿನಾಂಕ:೧೩.೭.೨೦೦೪ರ ಸರ್ಕಾರಿ ಆದೇಶದಲ್ಲಿ, ತುಮಕೂರು ತಾಲ್ಲೂಕು ಮಲ್ಲಸಂದ್ರದ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ, ಅನುದಾನರಹಿತ ವಿಭಾಗಗಳಿಗೆ ನೇಮಕಗೊಂಡ ಶಿಕ್ಷಕರಿಗೆ ಅನುದಾನ ಬಿಡುಗಡೆ ಮಾಡಿದ ಆಪಾದನೆಯ ಮೇಲೆ, ಶಿಸ್ತು ಕ್ರಮ/ಕ್ರಿಮಿನಲ್ ಕ್ರಮ ಬಾಕಿಯಿರಿಸಿ, ೭ ಜನ ಅಧಿಕಾರಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಮೇಲೆ (೨)ರಲ್ಲಿ ಓದಲಾಗಿರುವ ದಿನಾಂಕ:೧೩.೭.೨೦೦೪ರ ಸರ್ಕಾರಿ ಆದೇಶದಲ್ಲಿ, ಸದರಿ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮ, ೧೯೮೪ರ ಸೆಕ್ಷನ್ ೭(೨)(ಎ)ರಡಿ ತನಿಖೆಗೆ ಲೋಕಾಯುಕ್ತರಿಗೆ ವಹಿಸಲಾಗಿದೆ.

ಆದರೆ ಸದರಿ ೭ ಅಧಿಕಾರಿಗಳಲ್ಲಿ, ೪ ಅಧಿಕಾರಿಗಳು ೧೯೯೩-೯೪ ರಿಂದ ೧೯೯೮-೯೯ರವರೆಗೆ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ, ಮಲ್ಲಸಂದ್ರ, ತುಮಕೂರು ತಾಲ್ಲೂಕು, ಮಾನ್ಯತೆ ಆಗದೆ ಇರುವ ಅವಧಿಯಲ್ಲಿ ಅನುದಾನ ಬಿಡುಗಡೆ ಮಾಡಿರುವ ಅಕ್ರಮವನ್ನೂ ಸಹ ಎಸಗಿದ್ದಾರೆ. ವಿವರಗಳು ಕೆಳಕಂಡಂತಿವೆ:

**ಹೆಸರು** **ಅವಧಿ**

೧. ಶ್ರೀ ಸೈಯದ್ ಖಲಂದರ್ - ದಿನಾಂಕ:೨೭.೫.೯೨ ರಿಂದ ೨೨.೪.೯೪ರವರೆಗೆ
೨. ಶ್ರೀ ಹೆಚ್.ಡಿ.ಗೋವಿಂದಯ್ಯ - ದಿನಾಂಕ:೨೨.೪.೯೪ ರಿಂದ ೮.೨.೯೬ರವರೆಗೆ
೩. ಶ್ರೀ ಪ್ರಭಾಕರ್ - ದಿನಾಂಕ:೯.೨.೯೬ ರಿಂದ ೨೩.೭.೯೭ರವರೆಗೆ
೪. ಶ್ರೀ ಟಿ.ಸಿ.ಚಂದ್ರಯ್ಯ - ದಿನಾಂಕ:೨೪.೭.೯೭ ರಿಂದ೧೦.೭.೨೦೦೦ರವರೆಗೆ

**ಸರ್ಕಾರದ ಆದೇಶ ಸಂಖ್ಯೆ.ಇ ಡಿ ೯ ಡಿಜಿಡಿ ೨೦೦೩(I) ಬೆಂಗಳೂರು, ದಿನಾಂಕ:೨೩ನೇ ಜುಲೈ ೨೦೦೪.**

ಆದುದರಿಂದ ದಿನಾಂಕ:೧೩.೭.೨೦೦೪ರ ಸರ್ಕಾರಿ ಆದೇಶ ಸಂಖ್ಯೆ.ಇ ಡಿ ೯ ಡಿಜಿಡಿ ೨೦೦೩(I)ನ್ನು ಮುಂದುವರಿಸುತ್ತಾ, ೧೯೯೩-೯೪ನೇ ಸಾಲಿನಿಂದ ೧೯೯೮-೯೯ನೇ ಸಾಲಿನವರೆಗೆ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ, ಮಲ್ಲಸಂದ್ರ, ತುಮಕೂರು ತಾಲ್ಲೂಕು, ಮಾನ್ಯತೆಯಾಗದೆ ಅನುದಾನ ನೀಡಿದ ಅಕ್ರಮದ ಬಗ್ಗೆಯೂ ತನಿಖೆಗಾಗಿ ಮಾನ್ಯ ಕರ್ನಾಟಕ ಲೋಕಾಯುಕ್ತರಿಗೆ ಈ ಮೂಲಕ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 801

ಎಫ್.ಆರ್.ಸಂಬರಗಿ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

**ಕಾನೂನು ಸಚಿವಾಲಯ**

**ವಿಷಯ:** ಬೀದರ್ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 79 ಎಲ್ಎಸಿ 2003, ದಿನಾಂಕ: 16-4-2003.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ರವರ ಪತ್ರ ಸಂಖ್ಯೆ ಜಿಒಬಿ-2-67 (25-30)2004, ದಿನಾಂಕ: 18-3-2004.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ದಿನಾಂಕ: 16-4-2003ರ ಸರ್ಕಾರಿ ಆದೇಶದಲ್ಲಿ ದಿನಾಂಕ:1-4-2003 ರಿಂದ 31-3-2004 ರವರೆಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಲಾಗಿತ್ತು. ಅವುಗಳ ಕಾರ್ಯಾವಧಿಯು ದಿನಾಂಕ: 31-3-2004ಕ್ಕೆ ಪೂರ್ಣಗೊಂಡಿದೆ.

1) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ (2ನೇ ನ್ಯಾಯಾಲಯ) ಬೀದರ್
2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ಮತ್ತು ಸಿಜೆಎಂ ನ್ಯಾಯಾಲಯ ಬೀದರ್
3) ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುಮ್ನಾಬಾದ್.
4) ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯ, ಬಸವಕಲ್ಯಾಣ.
5) ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಾಲ್ಕಿ.
6) ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೀದರ್.

ಸದರಿ ನ್ಯಾಯಾಲಯಗಳಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ ಸದರಿ ನ್ಯಾಯಾಲಯಗಳನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.4.2004 ರಿಂದ ಖಾಯಂಗೊಳಿಸಲು ಮೇಲೆ ಓದಲಾದ (2)ರ ದಿನಾಂಕ:18.3.2004ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 29 ಎಲ್ಎಸಿ 2004, ಬೆಂಗಳೂರು, ದಿನಾಂಕ: 5ನೇ ಜುಲೈ 2004**

ಬೀದರ್ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳಿಗೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ನ್ಯಾಯಾಲಯಗಳ ಕಾರ್ಯಾವಧಿಯನ್ನು ದಿನಾಂಕ:1.4.2004 ರಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿದೆ.

1) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ (2ನೇ ನ್ಯಾಯಾಲಯ) ಬೀದರ್
2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ಮತ್ತು ಸಿಜೆಎಂ ನ್ಯಾಯಾಲಯ ಬೀದರ್
3) ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯ, ಬಸವಕಲ್ಯಾಣ.
4) ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುಮ್ನಾಬಾದ್.
5) ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಾಲ್ಕಿ.
6) ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೀದರ್.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01 ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 802

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ರಾಜ್ಯದಲ್ಲಿನ ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಈ ಕುರಿತಂತೆ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿನ ಈ ಕೆಳಕಂಡ 10 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯು ಅವುಗಳ ಮುಂದೆ ಸೂಚಿಸಿರುವ ದಿನಾಂಕದಂದು ಅಂತ್ಯಗೊಂಡಿದ್ದು, ಈ ನ್ಯಾಯಾಲಯಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರಕರಣಗಳು ಬಾಕಿ ಇರುವುದರಿಂದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ಮುಕ್ತಾಯಗೊಂಡ ದಿನಾಂಕದಿಂದ ಕ್ರಮ ಸಂಖ್ಯೆ 1 ರಿಂದ 4ರ ವರೆಗಿನ ನ್ಯಾಯಾಲಯಗಳನ್ನು ಎರಡು ವರ್ಷಗಳ ಅವಧಿಗೆ ಮತ್ತು ಕ್ರಮ ಸಂಖ್ಯೆ 5 ರಿಂದ 10ರ ವರೆಗಿನ ನ್ಯಾಯಾಲಯಗಳನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

| ಕ್ರ. ಸಂ. | ನ್ಯಾಯಾಲಯದ ಹೆಸರು | ಅವಧಿ ಮುಕ್ತಾಯಗೊಂಡ ದಿನಾಂಕ |
|---|---|---|
| 1. | ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಹೊಳಲ್ಕೆರೆ. | 6-4-2004 |
| 2. | ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಚಳ್ಳಕೆರೆ. | 11-4-2004 |
| 3. | 1 ಮತ್ತು 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಚಿತ್ರದುರ್ಗ. | 16-4-2004 |

| ಕ್ರ. ಸಂ. | ನ್ಯಾಯಾಲಯದ ಹೆಸರು | ಅವಧಿ ಮುಕ್ತಾಯಗೊಂಡ ದಿನಾಂಕ |
|---|---|---|
| 4. | ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಟಿ. ನರಸೀಪುರ. | 10-4-2004 |
| 5. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ., ಮಾಗಡಿ. | 22-4-2004 |
| 6. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ., ನೆಲಮಂಗಲ. | 22-4-2004 |
| 7. | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ., ಆನೇಕಲ್. | 22-4-2004 |
| 8. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ., ಹೊಸಕೋಟೆ. | 22-4-2004 |
| 9. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ., ಚನ್ನಪಟ್ಟಣ. | 22-4-2004 |
| 10. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ., ರೋಣ. | 21-4-2004 |

**ಸರ್ಕಾರಿ ಆದೇಶ ಸಂಖ್ಯೆ: ಲಾ 45 ಎಲ್ಎಸಿ 2004, ಬೆಂಗಳೂರು, ದಿನಾಂಕ: 28ನೇ ಮೇ 2004**

ಪ್ರಸ್ತಾವನೆಯಲ್ಲಿ ಹೆಸರಿಸಲಾದ ರಾಜ್ಯದ 10 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ಕಾರ್ಯಾವಧಿ ಮುಕ್ತಾಯಗೊಂಡ ದಿನಾಂಕದಿಂದ ಕ್ರಮ ಸಂಖ್ಯೆ: 1 ರಿಂದ 4 ರವರೆಗಿನ ನ್ಯಾಯಾಲಯಗಳನ್ನು ಎರಡು ವರ್ಷಗಳ ಅವಧಿಗೆ ಮತ್ತು ಕ್ರಮ ಸಂಖ್ಯೆ 5 ರಿಂದ 10ರ ವರೆಗಿನ ನ್ಯಾಯಾಲಯಗಳನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01 ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 803

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಪೈಲಟ್ ಪ್ರಾಜೆಕ್ಟ್ ಯೋಜನೆಯಡಿಯಲ್ಲಿ ಸೃಜಿಸಲಾದ ಹೆಚ್ಚುವರಿ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 105 ಎಲ್ಎಸಿ 2003, ದಿನಾಂಕ: 7-6-2003.
2. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರಸಂಖ್ಯೆ:ಜಿಒಬಿ-2-173: 2004, ದಿನಾಂಕ:8-6-2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:7-6-2003ರ ಸರ್ಕಾರಿ ಆದೇಶದನ್ವಯ ಪೈಲಟ್ ಪ್ರಾಜೆಕ್ಟ್ ಯೋಜನೆಯಡಿಯಲ್ಲಿ ಸೃಜಿಸಲಾದ ಈ ಕೆಳಕಂಡ 14 ಹೆಚ್ಚುವರಿ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 30-6-2004ಕ್ಕೆ ಪೂರ್ಣಗೊಳ್ಳುವುದರಿಂದ, ಸದರಿ ನ್ಯಾಯಾಲಯಗಳನ್ನು ದಿನಾಂಕ: 1-7-2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುವಂತೆ ಮೇಲೆ ಓದಲಾದ (2)ರ ದಿನಾಂಕ: 8-6-2004ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್‌ರವರು ಕೋರಿರುತ್ತಾರೆ.

1) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಕೆ.ಜಿ.ಎಫ್.
2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮುಳಬಾಗಿಲು.
3) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಶಿಡ್ಲಘಟ್ಟ.
4) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮಾಲೂರು.
5) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹೊಸದುರ್ಗ.
6) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹೊಳಲ್‌ಕೆರೆ.
7) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಚಳ್ಳಕೆರೆ.
8) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹಿರಿಯೂರು.
9) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಕಡೂರು.
10) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮೂಡಿಗೆರೆ.
11) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹರಿಹರ.
12) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಶ್ರೀರಂಗಪಟ್ಟಣ.
13) 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ದಾವಣಗೆರೆ.
14) ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು.

**ಸರ್ಕಾರಿ ಆದೇಶ ಸಂಖ್ಯೆ: ಲಾ 52 ಎಲ್ಎಸಿ 2004, ಬೆಂಗಳೂರು, ದಿನಾಂಕ: 16ನೇ ಜುಲೈ 2004**

ಪ್ರಸ್ತಾವನೆಯಲ್ಲಿ ಹೆಸರಿಸಲಾದ ಪೈಲಟ್ ಪ್ರಾಜೆಕ್ಟ್ ಯೋಜನೆಯಡಿಯಲ್ಲಿ ಸೃಜಿಸಲಾದ 14 ಹೆಚ್ಚುವರಿ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1-7-2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ “2014-00-105-0-01 ಯೋಜನೇತರ” ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 804

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ರಾಜ್ಯದ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಪ್ರಸ್ತಾವನೆಗಳು.

**ಪ್ರಸ್ತಾವನೆ:**

ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯು ಅವುಗಳ ಮುಂದೆ ಸೂಚಿಸಿರುವ ದಿನಾಂಕದಂದು ಅಂತ್ಯಗೊಂಡಿದ್ದು, ಈ ನ್ಯಾಯಾಲಯಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರಕರಣಗಳು ಬಾಕಿ ಇರುವುದರಿಂದ, ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಪೂರ್ಣಗೊಂಡ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

| ಕ್ರ. ಸಂ. | ನ್ಯಾಯಾಲಯದ ಹೆಸರು | ಅವಧಿ ಮುಕ್ತಾಯಗೊಂಡ ದಿನಾಂಕ |
|---|---|---|
| 1. | ಕುಟುಂಬ ನ್ಯಾಯಾಲಯ, ದಾವಣಗೆರೆ | 26-6-2004 |
| 2. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ.) ಹೊಸಪೇಟೆ | 22-4-2004 |
| 3. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚನ್ನರಾಯಪಟ್ಟಣ | 15-4-2004 |
| 4. | ಸಿವಿಲ್ ನ್ಯಾಯಾಧೀಶರು (ಹಿ.ವಿ.) ಬಸವನ ಬಾಗೇವಾಡಿ | 21-4-2004 |
| 5. | 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕಾರ್ಕಳ. | 22-4-2004 |
| 6. | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ.) ಶಿವಮೊಗ್ಗ | 22-4-2004 |
| 7. | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ. | 21-4-2004 |
| 8. | ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಕೊಪ್ಪಳ. | 18-4-2004 |

**ಸರ್ಕಾರಿ ಆದೇಶ ಸಂಖ್ಯೆ: ಲಾ 48 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 16ನೇ ಜುಲೈ 2004**

ಪ್ರಸ್ತಾವನೆಯಲ್ಲಿ ತಿಳಿಸಿರುವ 8 ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ಪೂರ್ಣಗೊಂಡ ದಿನಾಂಕದಂದು ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಕುಟುಂಬ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ “2014-00-117-0-00 ಯೋಜನೇತರ” ಅಡಿಯಲ್ಲಿ ಮತ್ತು ಉಳಿದ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ “2014-00-105-0-01-ಯೋಜನೇತರ” ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 805

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ರಾಜ್ಯದ ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಪ್ರಸ್ತಾವನೆಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿನ ಈ ಕೆಳಕಂಡ 8 ವಿವಿಧ ನ್ಯಾಯಾಲಯಗಳ ಕಾರ್ಯಾವಧಿಯು ಅವುಗಳ ಮುಂದೆ ಸೂಚಿಸಿರುವ ದಿನಾಂಕದಂದು ಅಂತ್ಯಗೊಂಡಿದ್ದು, ಈ ನ್ಯಾಯಾಲಯಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರಕರಣಗಳು ಬಾಕಿ ಇರುವುದರಿಂದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಕ್ತಾಯಗೊಂಡ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

| ಕ್ರ. ಸಂ. | ನ್ಯಾಯಾಲಯದ ಹೆಸರು | ಅವಧಿ ಮುಕ್ತಾಯಗೊಂಡ ದಿನಾಂಕ |
|---|---|---|
| 1. | 2ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು. | 19-7-2004 |
| 2. | 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು. | 24-6-2004 |
| 3. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆಎಂಎಫ್‌ಸಿ, ಆಲಂದ. | 30-6-2004 |
| 4. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ.) ರಾಮನಗರ | 21-4-2004 |

| ಕ್ರ. ಸಂ. | ನ್ಯಾಯಾಲಯದ ಹೆಸರು | ಅವಧಿ ಮುಕ್ತಾಯಗೊಂಡ ದಿನಾಂಕ |
|---|---|---|
| 5. | ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮದ್ದೂರು. | 19-7-2004 |
| 6. | ಜೆಎಂಎಫ್‌ಸಿ 5ನೇ ನ್ಯಾಯಾಲಯ, ಮಂಗಳೂರು. | 24-6-2004 |
| 7. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಬೆಳತಂಗಡಿ. | 24-6-2004 |
| 8. | ಜೆಎಂಎಫ್‌ಸಿ 4ನೇ ನ್ಯಾಯಾಲಯ, ಮಂಗಳೂರು. | 19-7-2004 |

**ಸರ್ಕಾರಿ ಆದೇಶ ಸಂಖ್ಯೆ: ಲಾ 53 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 17ನೇ ಜುಲೈ 2004**

ಪ್ರಸ್ತಾವನೆಯಲ್ಲಿ ಹೆಸರಿಸಲಾದ ರಾಜ್ಯದ 8 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಕಾರ್ಯಾವಧಿ ಮುಕ್ತಾಯಗೊಂಡ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಪ್ರಸ್ತಾವನೆಯಲ್ಲಿನ ಕ್ರಮಸಂಖ್ಯೆ:1 ರಿಂದ 7 ರವರೆಗಿನ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಮತ್ತು ಕ್ರಮ ಸಂಖ್ಯೆ: 8ರ ನ್ಯಾಯಾಲಯದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-108-0-01 ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 806

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ರಾಜ್ಯದ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಪ್ರಸ್ತಾವನೆಗಳು.

**ಪ್ರಸ್ತಾವನೆ:**

ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ 31.3.2004ಕ್ಕೆ ಪೂರ್ಣಗೊಂಡಿದ್ದು, ಈ ನ್ಯಾಯಾಲಯಗಳಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ, ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.4.2004 ರಿಂದ ಖಾಯಂಗೊಳಿಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

1. ಕುಟುಂಬ ನ್ಯಾಯಾಲಯ - ಬಿಜಾಪುರ
2. ಕುಟುಂಬ ನ್ಯಾಯಾಲಯ - ರಾಯಚೂರು
3. 2ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.
4. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುದೋಳ್.
5. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾವೇರಿ.
6. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಯಬಾಗ್.

**ಸರ್ಕಾರಿ ಆದೇಶ ಸಂಖ್ಯೆ: ಲಾ 28 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 15ನೇ ಜುಲೈ 2004**

ಪ್ರಸ್ತಾವನೆಯಲ್ಲಿ ತಿಳಿಸಿರುವ 6 ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ಪೂರ್ಣಗೊಂಡ ದಿನಾಂಕ:1.4.2004 ರಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಿದೆ.

ಕುಟುಂಬ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-117-0-00 ಯೋಜನೇತರ" ಅಡಿಯಲ್ಲಿ ಮತ್ತು ಉಳಿದ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 807

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಐ.ಎ. ಹವಾಲ್ದಾರ, ನಿವೃತ್ತ ಹಿಂದಿ ಉಪನ್ಯಾಸಕರು, ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 222/ಡಿಪಿಐ 99 ದಿ:9-2-2000ರನ್ವಯ 10 ವರ್ಷಗಳ ಕಾಲಮಿತಿ ಬಡ್ತಿಯನ್ನು ಮಂಜೂರು ಮಾಡಿರುವುದನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಪಪೂಶಿಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಪೂಶಿಇ ಆರ್‌ಕೆ 15:ಸ್ವಚಾಬ 2001-02/ದಿ:15-4-2002.
2. ಸರ್ಕಾರದ ಆದೇಶ ಸಂಖ್ಯೆ:ಇಡಿ222/ಡಿಪಿಐ99:ದಿ:9-2-2000.
3. ನೋಟೀಸ್ ಸಂಖ್ಯೆ:ಇಡಿ832 ಡಿಪಿಐ 2003:ದಿ:19-5-2004.
4. ಶ್ರೀಯುತರ ಮನವಿ ದಿ:3-6-2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ 1ರ ಪತ್ರದಲ್ಲಿ ನಿರ್ದೇಶಕರು, ಪಪೂಶಿಇ ಬೆಂಗಳೂರು ಇವರು ಶ್ರೀ ಐ.ಎ. ಹವಲ್ದಾರ, ನಿವೃತ್ತ ಹಿಂದಿ ಉಪನ್ಯಾಸಕರು ಇವರಿಗೆ 15 ವರ್ಷಗಳ ಸ್ವ ಚಾ ವೇ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿ ದಾಖಲಾತಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಮೇಲೆ ಓದಲಾದ 2ರ ಆದೇಶದನ್ವಯ ಇವರಿಗೆ 10 ವರ್ಷಗಳ ಕಾಲಮಿತಿ ಬಡ್ತಿಯನ್ನು ಮಂಜೂರು ಮಾಡಲಾಗಿದೆ. ಆದರೆ ದಾಖಲಾತಿಗಳನ್ನು ಪರಿಶೀಲಿಸಲಾಗಿ ಇವರು ಇಲಾಖಾ ಪರೀಕ್ಷೆಯಾದ ಜನರಲ್ ಲಾ ಭಾಗ 1ನ್ನು 1995ನೇ ಸಾಲಿನ 2ನೇ ಅಧಿವೇಶನದಲ್ಲಿ ಪಾಸು ಮಾಡಿರುವುದು ಕಂಡು ಬರುತ್ತದೆ. ಕರ್ನಾಟಕ ನಾಗರೀಕ ಸೇವಾ ಕಾಲಮಿತಿ ಮುಂಬಡ್ತಿ ನಿಯಮಾವಳಿಗಳು 1983ರನ್ವಯ ವೇತನ ಬಡ್ತಿ ಮಂಜೂರು ಮಾಡಬೇಕಾದಲ್ಲಿ ನಿಗದಿಪಡಿಸಲಾದ ಎಲ್ಲಾ ಷರತ್ತುಗಳನ್ನು ಪೂರೈಸಿರಬೇಕಾಗುತ್ತದೆ. ಆದರೆ ಇವರು ಇಲಾಖಾ ಪರೀಕ್ಷೆಯನ್ನು ತಡವಾಗಿ ಪಾಸು ಮಾಡಿದ್ದು, ಇದರಿಂದಾಗಿ ಇವರು ಸದರಿ ಇಲಾಖಾ ಪರೀಕ್ಷೆಯ ಫಲಿತಾಂಶ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಕಾಲಮಿತಿ ವೇತನ ಬಡ್ತಿಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಇದರಿಂದಾಗಿ ಇವರಿಗೆ ದಿ:30.10.84ಕ್ಕೆ ನೀಡಿರುವ ಕಾಲಮಿತಿ ವೇತನ ಬಡ್ತಿಯನ್ನು ರದ್ದುಗೊಳಿಸಲು ತೀರ್ಮಾನಿಸಿ, ಓದಲಾದ 3ರ ಪ್ರಕಾರ ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ತಿಳಿಸುವಂತೆ ನೋಟೀಸ್ ಜಾರಿ ಮಾಡಲಾಗಿತ್ತು. ಸದರಿ ನೋಟೀಸ್‌ಗೆ ಶ್ರೀಯುತರು ಓದಲಾದ 4ರ ಮನವಿಯಲ್ಲಿ ಯಾವ ದಿನಾಂಕಕ್ಕೆ ವೇತನ ಬಡ್ತಿ ಪಡೆಯಲು ಅರ್ಹರಾಗುವರೋ, ಆ ದಿನಾಂಕಕ್ಕೆ ಅನ್ವಯಿಸಿ ಆದೇಶ ಮಾಡುವಂತೆ ಮನವಿ ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ನಿಯಮಾನುಸಾರ ಪರಿಶೀಲಿಸಿ ಇವರಿಗೆ 10 ವರ್ಷಗಳ ಕಾಲಮಿತಿ ಬಡ್ತಿಯನ್ನು ರದ್ದುಪಡಿಸಬಾರದೆಂಬ ಬಗ್ಗೆ ಯಾವುದೇ ಸಮಂಜಸವಾದ ಕಾರಣಗಳನ್ನು ನೀಡದಿರುವುದರಿಂದ ಇವರಿಗೆ ನೀಡಿರುವ ಕಾಲಮಿತಿ ವೇತನ ಬಡ್ತಿಯನ್ನು ರದ್ದುಗೊಳಿಸುವ ಬಗ್ಗೆ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 832 ಡಿಪಿಐ 2003, ಬೆಂಗಳೂರು, ದಿನಾಂಕ: 24ನೇ ಜುಲೈ 2004**

ಶ್ರೀ ಐ.ಎ. ಹವಲ್ದಾರ್, ನಿವೃತ್ತ ಹಿಂದಿ ಉಪನ್ಯಾಸಕರು, ಸಪಪೂಕಾ ಕುಷ್ಟಗಿ, ಕೊಪ್ಪಳ ಜಿಲ್ಲೆ ಇವರಿಗೆ ದಿ:9-2-2000ದ ಸರ್ಕಾರದ ಆದೇಶ ಸಂಖ್ಯೆ:ಇಡಿ 222 ಡಿಪಿಐ 99ರನ್ವಯ ದಿ:30-10-84ಕ್ಕೆ ಮಂಜೂರು ಮಾಡಿರುವ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರದ್ದುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 808

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

## ಕಾನೂನು ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 46 ಎಲ್‌ಎಸಿ 2003, ದಿನಾಂಕ: 5-3-2003.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ:ಜಿಒಬಿ-2:67 (100-106)2004, ದಿನಾಂಕ:19-2-2004.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯು ಮೇಲೆ ಓದಲಾದ (1)ರ ಸರ್ಕಾರಿ ಆದೇಶದನ್ವಯ ದಿನಾಂಕ: 31-3-2004ಕ್ಕೆ ಪೂರ್ಣಗೊಂಡಿದ್ದು, ಈ ನ್ಯಾಯಾಲಯಗಳಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ ಇವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1-4-2004 ರಿಂದ ಖಾಯಂಗೊಳಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರು ಕೋರಿರುತ್ತಾರೆ.

1) ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಶಿವಮೊಗ್ಗ.
2) ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭದ್ರಾವತಿ.
3) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತೀರ್ಥಹಳ್ಳಿ.
4) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೊರಬ.
5) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊಸನಗರ.
6) 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭದ್ರಾವತಿ.
7) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿವಮೊಗ್ಗ.

**ಸರ್ಕಾರಿ ಆದೇಶ ಸಂಖ್ಯೆ: ಲಾ 30 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 16ನೇ ಜುಲೈ 2004**

ಪ್ರಸ್ತಾವನೆಯಲ್ಲಿ ತಿಳಿಸಿರುವ 7 ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ಪೂರ್ಣಗೊಂಡ ದಿನಾಂಕ:1.4.2004 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 809

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಶ್ರೀ ಬೈಲಪ್ಪ, ಮಾಜಿ ಎಪಿಸಿ ೧೭೦೯, ಸಿಎಆರ್(ಕೇಂದ್ರ) ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
೧. ಉಪ ಆರಕ್ಷಕ ಆಯುಕ್ತರು, ಸಿಎಆರ್(ಕೇಂದ್ರ), ಬೆಂಗಳೂರು ರವರ ಆದೇಶ ಸಂಖ್ಯೆ: ಡಿಇ /೫೪/೨೦೦೨-೦೩ ಓಬಿ ಸಂಖ್ಯೆ:೦೭/೨೦೦೩-೦೪ ದಿನಾಂಕ:೨/೭-೬-೨೦೦೩.
೨. ಜಂಟಿ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ ರವರ ಆದೇಶ ಸಂಖ್ಯೆ:೪೨/ಅಪೀಲು/೨೦೦೩ ದಿನಾಂಕ:೧೯-೮-೨೦೦೩.
೩. ಅರ್ಜಿದಾರರ ಮನವಿ ದಿನಾಂಕ:೨-೯-೨೦೦೩.
೪. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨)೬೮/ ೨೦೦೩-೦೪ ದಿನಾಂಕ:೨೨-೧೨-೨೦೦೩.

**ಪ್ರಸ್ತಾವನೆ:**

ಶ್ರೀ ಬೈಲಪ್ಪ, ಎಪಿಸಿ ೧೭೦೯, ಸಿಎಆರ್(ಕೇಂದ್ರ), ಬೆಂಗಳೂರು ರವರ ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ ೧೯೬೫ರ ನಿಯಮ ೬ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಎಪಿಸಿ ೧೭೦೯, ಬೈಲಪ್ಪ, ಎ ವಿಭಾಗ, ಸಿಎಆರ್(ಕೇಂದ್ರ) ಬೆಂಗಳೂರು ಆದ ನಿಮ್ಮನ್ನು ದಿನಾಂಕ:೨-೩-೨೦೦೧ರಂದು ಆರ್.ಬಿ.ಐ. ಕಾವಲು ದಳದ ಕರ್ತವ್ಯಕ್ಕೆ ನೇಮಕಾತಿಯನ್ನು ಮಾಡುತ್ತಿದ್ದ ಸಂದರ್ಭದಲ್ಲಿ ನೀವು ಶ್ರೀ ಜಯರಾಜ್, ಎಆರ್ಎಸ್ಐ ಮತ್ತು ಮುಖ್ಯ ಪೇದೆ ೧೩೧, ಎಸ್.ನರಸಿಂಹಯ್ಯ ರವರನ್ನು ಅವಾಚ್ಯ ಶಬ್ದಗಳಿಂದ ಬೈದು ರೈಫಲ್‌ನಿಂದ ಹಲ್ಲೆ ಮಾಡಿರುವುದಾಗಿ ತಿಳಿದುಬಂದಿದ್ದು ನೀವು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು ಮತ್ತು ಶಿಸ್ತಿನ ಇ ಲಾಖೆಯಲ್ಲಿ ಶಿಸ್ತನ್ನು ಪರಿಪಾಲಿಸದೇ ನಿಮ್ಮ ಕರ್ತವ್ಯದಲ್ಲಿ ಅಶಿಸ್ತು, ದುರ್ನಡತೆ ಹಾಗೂ ಬೇಜವಾಬ್ದಾರಿತನವನ್ನು ಎತ್ತಿ ತೋರಿಸಿರುತ್ತೀರಿ".

ಮೇಲ್ಕಂಡ ಆರೋಪ ಇ ಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡಿಸಿಪಿ, ಸಿಎಆರ್(ಕೇಂದ್ರ), ಬೆಂಗಳೂರು ರವರು ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ್ದು, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಎರಡದ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

೧) ತಾನು ಡಿಪ್ರೆಸ್ಡ್‌ಕ್ಲಾಸ್‌ಗೆ ಸೇರಿದವನಾಗಿದ್ದು, ತನ್ನ ಮೇಲೆ ಜಾತಿ ದ್ವೇಷದಿಂದ ಸುಳ್ಳು ಪ್ರಕರಣ ದಾಖಲಾಗಿದೆ. ತಾನು ಮೇಲಾಧಿಕಾರಿಗಳನ್ನು ದೂಷಿಸಿಲ್ಲ.

೨) ೧೭ ವರ್ಷಗಳ ಸೇವೆ ಸಲ್ಲಿಸಿದ್ದು ತನಗೆ ನೌಕರಿ ಬಿಟ್ಟರೆ ಬೇರೆ ಆಧಾರವಿಲ್ಲ.ತನ್ನ ಕುಟುಂಬ ಬೀದಿಪಾಲಾಗಿದೆ.

೩) ತನ್ನ ವಿರುದ್ಧ ಆಪಾದನೆ ನಿಸ್ಸಂದೇಹವಾಗಿ ಸಾಬೀತಾಗಿರುವುದಿಲ್ಲ. ಈ ಬಗ್ಗೆ ಸುಪ್ರೀಂಕೋರ್ಟ್ ಅನೇಕ ಪ್ರಕರಣಗಳಲ್ಲಿ ತೀರ್ಪು ನೀಡಿದೆ. ಈ ಹಿನ್ನೆಲೆಯಲ್ಲಿ ತನ್ನನ್ನು ದೋಷಮುಕ್ತರನ್ನಾಗಿಸಬೇಕು.

೪) ಇ ಲಾಖಾ ವಿಚಾರಣೆಯಲ್ಲಿ ಅ.ಸಾ.ಗಳ ಹೇಳಿಕೆಯನ್ನು ಮಾತ್ರ ಪಡೆದು ರಕ್ಷಣಾ ಸಾಕ್ಷಿಗಳ ಹೇಳಿಕೆಯನ್ನು ಪರಿಗಣಿಸಿಲ್ಲ.

೫) ಇ ಲಾಖಾ ವಿಚಾರಣೆಯಲ್ಲಿ ತನ್ನನ್ನು ಪ್ರತಿರಕ್ಷಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಿಲ್ಲ.

ಮೇಲ್ಕಂಡ ವಾದಾಂಶಗಳು ಸತ್ಯವಾಗಿರುವುದಿಲ್ಲ. ಅ.ಸಾ.೧-೨ನ್ನು ದೂಷಿಸಿರುವುದು ಅ.ಸಾ.ಗಳು ೬ ಜನ ಸಾಕ್ಷ್ಯ ನುಡಿದಿರುವುದರಿಂದ ನಿಸ್ಸಂದೇಹವಾಗಿ ಸಾಬೀತಾಗುತ್ತದೆ. ಅರ್ಜಿದಾರರು ಶಿಸ್ತಿನ ಇ ಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇ ವರ ಸೇವಾ ದಾಖಲೆಗಳನ್ನು ಪರಿಶೀಲಿಸಿದಲ್ಲಿ ಅನೇಕ ಬಾರಿ ಅಶಿಸ್ತಿನ ವರ್ತನೆಗೆ ಶಿಕ್ಷೆಗೆ ಗುರಿಯಾಗಿರುವುದು ಕಂಡುಬರುತ್ತದೆ. ಇ ವರ ಸೇವಾ ದಾಖಲೆಗಳಲ್ಲಿ ಒಳ್ಳೆಯ ನಮೂದು ಇ ರುವುದಿಲ್ಲ ಹಾಗೂ ಸೇವೆಗೆ ಸೇರಿದಾಗಿನಿಂದ ಸತತವಾಗಿ ದುರ್ನಡತೆಯನ್ನು ಪ್ರದರ್ಶಿಸಿರುತ್ತಾರೆ. ಇ ವರ ಸೇವಾ ಅವಧಿಯಲ್ಲಿ ಅನೇಕ ಬಾರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು ಆಯಾ ಪ್ರಕರಣಗಳಲ್ಲಿ ಸಾಕಷ್ಟು ಶಿಕ್ಷೆಯನ್ನು ಅನುಭವಿಸಿರುತ್ತಾರೆ. ಆದರೂ ಇ ವರ ವರ್ತನೆಯನ್ನು ಸರಿಪಡಿಸಿಕೊಂಡಿರುವುದಿಲ್ಲ. ದಿನಾಂಕ:೧೫-೭-೯೪ರಂದು ರಾತ್ರಿ ಅತೀ ಮುಖ್ಯವಾದ ಮತ್ತು ಜವಾಬ್ದಾರಿಯುತವಾದ ಕಾವಲುದಳ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ್ದರಿಂದ ಹಾಗೂ ದಿನಾಂಕ: ೧೩-೪-೯೯ರಂದು ಮಧ್ಯರಾತ್ರಿ ಮಾನ್ಯ ವಸತಿ ಸಚಿವರ ನಿವಾಸದ ಕಾವಲು ಕರ್ತವ್ಯದಲ್ಲಿ ಬೇಜವಾಬ್ದಾರಿ ತೋರಿದ ಪ್ರಯುಕ್ತ ಶಿಕ್ಷೆಗಳನ್ನು ವಿಧಿಸಲಾಗಿದೆ. ತಮ್ಮ ಮೇಲಧಿಕಾರಿಗಳು ಸೂಚಿಸಿದ ಕರ್ತವ್ಯಪಾಲನೆ ಮಾಡುವುದು ಬಿಟ್ಟು ಮೇಲಾಧಿಕಾರಿಗಳು ಮತ್ತು ಸಹೋದ್ಯೋಗಿಗಳೊಂದಿಗೆ ಪದೇಪದೇ ಅಸಭ್ಯವಾಗಿ ವರ್ತಿಸಿರುವುದು ಹಾಗೂ ಶಿಕ್ಷೆ ಅನುಭವಿಸಿರುವುದು ಕಂಡುಬರುತ್ತದೆ. ಮುಂದುವರಿದು ಶ್ರೀ ಬೈಲಪ್ಪ, ಎಪಿಸಿ ೧೭೦೯, ಎ-ವಿಭಾಗ, ಸಿ.ಎ.ಆರ್(ಕೇಂದ್ರ), ಬೆಂಗಳೂರು ಇ ವರು ದಿನಾಂಕ:೨-೩-೨೦೦೧ರಂದು ಆರ್.ಬಿ.ಐ. ಕಾವಲು ದಳದ ಕರ್ತವ್ಯಕ್ಕೆ ನೇಮಕಾತಿಯನ್ನು ಮಾಡಿದ್ದ ಸಂದರ್ಭದಲ್ಲಿ ಶ್ರೀ ಜಯರಾಜ್, ಎ.ಆರ್.ಎಸ್.ಐ., ಮತ್ತು ಮುಖ್ಯ ಪೇದೆ ೧೩೧, ಎನ್.ನರಸಿಂಹಯ್ಯ ಇ ವರುಗಳನ್ನು ಅವಾಚ್ಯ ಶಬ್ದಗಳಿಂದ ಬೈದು ರೈಫಲ್‌ನಿಂದ ಹಲ್ಲೆ ಮಾಡಿದ ಆರೋಪದ ಮೇಲೆ ಇ ವರ ವಿರುದ್ಧ ಇ ಲಾಖಾ ವಿಚಾರಣೆಯನ್ನು ನಡೆಸಿ, ಇ ಲಾಖಾ ವಿಚಾರಣೆಯಲ್ಲಿ ಇ ವರ ಮೇಲಿನ ಆರೋಪ ಸಾಬೀತಾಗಿರುತ್ತದೆ.

ಅಂತೆಯೇ, ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರರ ಮೇಲಿನ ಆಪಾದನೆ ನಿಸ್ಸಂದೇಹವಾಗಿ ಸಾಬೀತಾಗಿದ್ದು ಅವರ ಮೇಲಿನ ಆಪಾದನೆಯನ್ನು ಅಲ್ಲಗಳೆಯುವಂತಹ ಯಾವುದೇ ವಾದಾಂಶಗಳನ್ನು ಮಂಡಿಸಿರುವುದಿಲ್ಲವಾದ್ದರಿಂದ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯ ಬಗ್ಗೆ ಹಸ್ತಕ್ಷೇಪ ಮಾಡುವ ಅವಶ್ಯಕತೆ ಕಂಡುಬರುವುದಿಲ್ಲವೆಂದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೧೬೩ ಪೊಸಿಅ ೨೦೦೩, ಬೆಂಗಳೂರು, ದಿನಾಂಕ: ೧೯ನೇ ಜುಲೈ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ ೧೯೬೫ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬೈಲಪ್ಪ, ಎಪಿಸಿ ೧೭೭೯, ಸಿಎಆರ್(ಕೇಂದ್ರ), ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 810

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಬಸವರಾಜಪ್ಪ, ಹವಾಲ್ದಾರ್, ಕೆಎಸ್‌ಆರ್‌ಪಿ, ಬೆಂಗಳೂರುರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**

೧. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ರವರ ಆದೇಶ ಸಂಖ್ಯೆ:ಡಿಇ /೧೫/೯೯-೨೦೦೦ ದಿನಾಂಕ:೮-೧೦-೨೦೦೦.

೨. ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ರವರ ಆದೇಶ ಸಂಖ್ಯೆ:ಅಪೀಲು(೪)೧೪/೨೦೦೦-೦೨ ದಿನಾಂಕ:೨೯-೫-೨೦೦೨.

೩. ಅರ್ಜಿದಾರರ ಮನವಿ ದಿನಾಂಕ:---

೪. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨) ೬೦/೨೦೦೨-೦೩ ದಿನಾಂಕ:೧೯-೩-೨೦೦೩.

**ಪ್ರಸ್ತಾವನೆ:**

ಶ್ರೀ ಬಸವರಾಜಪ್ಪ, ಹವಾಲ್ದಾರ್, ಕೆಎಸ್‌ಆರ್‌ಪಿ, ಬೆಂಗಳೂರು ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ ೧೯೬೫ರ ನಿಯಮ ೬ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:**

೧) ಹವಾಲ್ದಾರ್ ಸಂ.೨೦, ಬಸವರಾಜಪ್ಪ, ಎ-ದಳ ಆದ ಇ ವರು ದಿನಾಂಕ:೨೦-೯-೯೯ರಂದು ೧೦.೦೦ ಗಂಟೆಗೆ ಎ-ದಳದ ತುಕಡಿಯ ಜೊತೆಯಲ್ಲಿ ವಿಶೇಷ ಕರ್ತವ್ಯಕ್ಕೆ ಚನ್ನಪಟ್ಟಣಕ್ಕೆ ಹೋಗುವಾಗ ಪಡೆಯ ಶಸ್ತ್ರಾಲಯದಿಂದ ೨ ಪೆಟ್ಟಿಗೆ ರಬ್ಬರ್ ಬುಲೆಟನ್ನು ತೆಗೆದುಕೊಂಡು ಹೋಗಿ ದಿ:೨೧-೯-೯೯ರಂದು ೨೩.೩೦ ಗಂಟೆಗೆ ಮರಳಿ ಕೇಂದ್ರ ಸ್ಥಾನಕ್ಕೆ ಬಂದನಂತರ ತಾವು ಪಡೆದ ರಬ್ಬರ್ ಬುಲೆಟ್ ಪೆಟ್ಟಿಗೆಯನ್ನು ಸರಿಯಾಗಿದೆಯೇ ಎಂದು ಪರಿಶೀಲಿಸದೇ ಶಸ್ತ್ರಾಲಯಕ್ಕೆ ಹಿಂತಿರುಗಿಸಿ ಲೋಪವೆಸಗಿ ಅಶಿಸ್ತು ಪ್ರದರ್ಶಿಸಿರುವ ಬಗ್ಗೆ.

೨) ದಿ:೨೨-೯-೯೯ರಂದು ೧೦ ಗಂಟೆಗೆ ಮಫ್ತಿ ಬಟ್ಟೆಯಲ್ಲಿ ಶಸ್ತ್ರಾಲಯಕ್ಕೆ ಬಂದು ರಬ್ಬರ್ ಬುಲೆಟ್ ಪೆಟ್ಟಿಗೆಯನ್ನು ಜಮಾ ಮಾಡದೇ ನಿನ್ನೆ ಜಮಾ ಮಾಡಿರುತ್ತೇನೆ ಎಂದು ಸುಳ್ಳು ಹೇಳಿ ಶಸ್ತ್ರಾಲಯದಲ್ಲಿರುವ ಎ-ದಳದ ಸಾಮಗ್ರಿ ಕೊಡುವ ಮತ್ತು ತೆಗೆದುಕೊಳ್ಳುವ ಪುಸ್ತಕವನ್ನು ಸಹಿ ಹಾಕಲು ಕೊಡಲು ಅಂದು ನೇಮಿಸಿದ ಶಸ್ತ್ರಾಲಯದ ಎನ್.ಸಿ.ಒ.ಹವಾಲ್ದಾರ್ ೪೦, ಹೆಚ್.ಸಿ. ರಾಜಯ್ಯ ನವರನ್ನು ಕೇಳಿದ್ದು, ಅವರು ನೀವು ತೆಗೆದುಕೊಂಡು ಹೋದ ಸಾಮಗ್ರಿಗಳನ್ನು ಸಂಪೂರ್ಣ ಹಿಂತಿರುಗಿಸಿಲ್ಲವೆಂದು ಪುಸ್ತಕವನ್ನು ಕೊಡಲು ನಿರಾಕರಿಸಿದ್ದಾರೆ. ಆಗ ನೀವು ಅವರನ್ನು ಶಸ್ತ್ರಾಲಯದಲ್ಲಿಯೇ ಹೊಡೆದು, ಒದ್ದು ಅವರು ಧರಿಸಿದ ಬಟ್ಟೆಯನ್ನು ಹರಿದುಹಾಕಿ, ಹಲ್ಲೆ ನಡೆಸಿ ಅತೀವ ದುರ್ನಡತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿದ್ದೀರಿ.

ಮೇಲ್ಕಂಡ ಆರೋಪಗಳು ಇ ಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಅರ್ಜಿದಾರರ ವೇತನವನ್ನು ಹವಾಲ್ದಾರ್ ಹುದ್ದೆಯ ಕನಿಷ್ಟ ಮಟ್ಟಕ್ಕೆ ೩ ವರ್ಷಕಾಲ ಇ ಳಿಸಿದ್ದು, ೩ ವರ್ಷಗಳ ನಂತರ ಹೊಸದಾಗಿ ವಾರ್ಷಿಕ ವೇತನಬಡ್ತಿಯನ್ನು ಪಡೆಯುವಂತೆ ಮೇಲೆ (೧)ರಲ್ಲಿ ಓದಲಾದ ಆದೇಶವನ್ನು ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು, ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

೧. ದಿನಾಂಕ:೨೦/೨೧-೯-೯೯ರಂದು ಚನ್ನಪಟ್ಟಣದ ವಿಶೇಷ ಕರ್ತವ್ಯದಲ್ಲಿ ತಾನು ಇ ದ್ದಾಗ ಗಾಯಗೊಂಡಿದ್ದು, ತಾನು ರಬ್ಬರ್ ಬುಲೆಟ್‌ಬಾಕ್ಸ್‌ಗಳನ್ನು ಶಸ್ತ್ರಾಗಾರಕ್ಕೆ ಹಿಂತಿರುಗಿಸುವ ಸ್ಥಿತಿಯಲ್ಲಿ ಇ ಲ್ಲದ್ದರಿಂದ ಒಬ್ಬ ಪೊಲೀಸ್ ಪೇದೆಯ ಸಂಗಡ ಶಸ್ತ್ರಾಗಾರಕ್ಕೆ ಕಳುಹಿಸಿದ್ದೇನೆ. ಆದ್ದರಿಂದ ಮೊದಲನೇ ಆರೋಪ ಸಾಬೀತಾಗಿಲ್ಲ.

೨. ಅ.ಸಾ.೧.ರವರೇ ತನ್ನ ಮೇಲೆ ಹಲ್ಲೆ ಮಾಡಿದ್ದು, ಯಾರಿಗೂ ಗಾಯವಾಗಿಲ್ಲ. ಆದರೆ ಅವರೇ ತನ್ನನ್ನು ಜಗಳಕ್ಕೆ ಪ್ರೇರೇಪಿಸಿದ್ದಾರೆ.

೩. ಅರ್ಜಿದಾರರಿಗೆ ಅ.ಸಾ.೧. ಹಣ ನೀಡಬೇಕಾಗಿದ್ದು, ಅದನ್ನು ಕೇಳಲು ಹೋದಾಗ ಈ ರೀತಿ ದೂರು ನೀಡಿ, ತನಗೆ ಶಿಕ್ಷೆಯಾಗಲು ಕಾರಣರಾಗಿದ್ದಾರೆ.

೪. ತನಗೆ ಅತೀ ಹೆಚ್ಚಿನ ಶಿಕ್ಷೆ ವಿಧಿಸಿದ್ದಾರೆ.

ಅರ್ಜಿದಾರರ ಮೇಲಿನ ಆರೋಪಗಳು ಇ ಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾಗಿವೆ. ಎರಡು ಬುಲೆಟ್ ಪ್ಯಾಕೆಟ್‌ಗಳಲ್ಲಿ ಒಂದನ್ನು ಮಾತ್ರ ಹಿಂತಿರುಗಿಸಿದ್ದು, ಎರಡನೇ ಪ್ಯಾಕೆಟ್ ವ್ಯಾನಿನಲ್ಲಿಯೇ ಉಳಿದಿದ್ದುದು ಅವರ ಕರ್ತವ್ಯ ನಿರ್ಲಕ್ಷತೆಯನ್ನು ನಿಸ್ಸಂದೇಹವಾಗಿ ಸಾಬೀತುಪಡಿಸಿದೆ. ಅ.ಸಾ.೧ ರವರಿಗೂ ತನಗೂ ಮನಸ್ತಾಪವಿತ್ತು ಎಂದು ವಾದ ಮಂಡಿಸಿದ್ದು, ಇ ದನ್ನು ಇ ಲಾಖಾ ವಿಚಾರಣೆಯ ಸಮಯದಲ್ಲಿ ತಿಳಿಸಬಹುದಿತ್ತು. ಈಗ ವಾದ ಮಂಡಿಸಿರುವುದು ನಂಬಲರ್ಹವಲ್ಲ. ರಬ್ಬರ್ ಬುಲೆಟ್ ಪ್ಯಾಕೆಟ್‌ಗಳನ್ನು ಅವು ಸರಿಯಾಗಿವೆಯೇ ಎಂದು ಪರಿಶೀಲಿಸದೇ ತಡವಾಗಿ ಶಸ್ತ್ರಾಲಯಕ್ಕೆ ಹಿಂತಿರುಗಿಸಿ, ಕರ್ತವ್ಯ ಲೋಪ ಮಾಡಿರುವುದು ಮತ್ತು ಅದನ್ನು ಪ್ರಶ್ನಿಸಿದ ಅಧಿಕಾರಿಯ ಮೇಲೆ ಹಲ್ಲೆ ನಡೆಸಿರುವುದು ಅವರ ಕರ್ತವ್ಯದಲ್ಲಿ ನಿರ್ಲಕ್ಷತನ ಮತ್ತು ದೌರ್ಜನ್ಯವನ್ನು ತೋರಿಸುತ್ತದೆ. ಇ ದಕ್ಕೆ ಕ್ಷಮೆ ನೀಡುವ ಸಮರ್ಥನೆ ಇ ರುವುದಿಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೨೨೬ ಪೊಸಿಅ ೨೦೦೨, ಬೆಂಗಳೂರು, ದಿನಾಂಕ: ೧೯ನೇ ಜುಲೈ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ ೧೯೬೫ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಸವರಾಜಪ್ಪ, ಹವಾಲ್ದಾರ್, ಕೆಎಸ್‌ಆರ್‌ಪಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 811

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯಲ್ಲಿ ಒಂದು ನಿರ್ದೇಶಕರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ಕಡತ ಸಂಖ್ಯೆ: ಐಟಿಡಿ 12 ಡಿಐಎಸ್ 2002.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ಕಡತದಲ್ಲಿ ಇಲಾಖೆಯ ಕಾರ್ಯದರ್ಶಿಯವರು ಆ ಇಲಾಖೆಯಲ್ಲಿ ಒಂದು ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಿ, ಆ ಹುದ್ದೆಯಲ್ಲಿ ಡಾ: ಹೆಚ್. ಹೊನ್ನೇಗೌಡ, ವಿಜ್ಞಾನಿ : ಇಂಜಿನಿಯರ್ (ಎಸ್.ಎಫ್) ಇಸ್ರೋ ಸಂಸ್ಥೆ (ಕೇಂದ್ರ ಸರ್ಕಾರ) ಇವರನ್ನು ವಿಲೀನಗೊಳಿಸುವಂತೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ರಾಜ್ಯದಲ್ಲಿ ಮಾಹಿತಿ ತಂತ್ರಜ್ಞಾನ ಬಳಕೆಯನ್ನು ಹೆಚ್ಚು ವ್ಯಾಪಕವಾಗಿ ಮತ್ತು ಔಚಿತ್ಯ ಪೂರ್ಣವಾಗಿ ನಡೆಸಲು ದೂರ ಸಂವೇದಿ ಏರಿಯಲ್ ಫೋಟೋಗ್ರಫಿ ಭೌಗೋಳಿಕ ಮಾಹಿತಿ ಇತ್ಯಾದಿಗಳ ತಾಂತ್ರಿಕತೆಯ ಅನುಭವವುಳ್ಳ ನಿರ್ದೇಶಕರ ಹುದ್ದೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯಲ್ಲಿ ಅಗತ್ಯವಾಗಿ ಬೇಕೆಂಬುದನ್ನು ಮನಗಂಡು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 58 ಸಸಿವಿ 2002, ಬೆಂಗಳೂರು, ದಿನಾಂಕ: 17ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ವೇತನ ಶ್ರೇಣಿ:ರೂ.13820-17320ನ್ನು ಹೊಂದಿರುವ ಒಂದು ನಿರ್ದೇಶಕರು (ತಾಂತ್ರಿಕ) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 345 ವೆಚ್ಚ-5:2004 ದಿನಾಂಕ: 6.4.2004ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 812

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿನ ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ಬೋಧಕರು ಮತ್ತು ಸಹಾಯಕ ಬೋಧಕರ ವೃತ್ತಿ ಕಲೆಗಳನ್ನು ಗುರುತಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ವಾಕೈ 04 ಕೈಸೇವಿ 2003, ದಿನಾಂಕ:10–02–2003.
2. ಸರ್ಕಾರದ ಆದೇಶ ಸಂಖ್ಯೆ:ವಾಕೈ 169 ಕೈಸೇವಿ 2003, ದಿನಾಂಕ:27–10–2003.
3. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರ ವ್ಯವಹಾರಗಳ ಕೊನೆಯ ಪತ್ರ ಸಂಖ್ಯೆ:ಆಡಳಿತ:ಸಿಬ್ಬಂದಿ:ಇ 8:320:2003–04, ದಿನಾಂಕ:07–01–2004 ಮತ್ತು 07–06–2004.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿದ್ದ ಒಟ್ಟು 42 ಕುಶಲಕರ್ಮಿ ತರಬೇತಿ ಸಂಸ್ಥೆಗಳ ಪೈಕಿ 22 ತರಬೇತಿ ಸಂಸ್ಥೆಗಳನ್ನು ರದ್ದುಪಡಿಸಿ ಇನ್ನುಳಿದ 20 ಕುಶಲಕರ್ಮಿ ತರಬೇತಿ ಸಂಸ್ಥೆಗಳನ್ನು ಪುನಶ್ಚೇತನಗೊಳಿಸಿ ಸದರಿ 20 ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ವೃತ್ತಿ ಕಲೆಗಳನ್ನು ಸಹ ಗುರುತಿಸಿ ಆದೇಶಿಸಲಾಗಿತ್ತು. ತದನಂತರ, ಮೇಲೆ ಓದಲಾದ (2)ರನ್ವಯ ಸರ್ಕಾರವು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯನ್ನು ಪುನರ್ ರಚಿಸಿ ಹೊರಡಿಸಿರುವ ಆದೇಶದಲ್ಲಿ ರಾಜ್ಯದಲ್ಲಿ ಒಟ್ಟು 27 ಕುಶಲಕರ್ಮಿ ತರಬೇತಿ ಕೇಂದ್ರಗಳನ್ನು ಮುಂದುವರಿಸಿಕೊಂಡು ಹೋಗಲು ಹಾಗೂ ಸದರಿ ಕುಶಲಕರ್ಮಿ ಕೇಂದ್ರಗಳಿಗೆ ಸಿಬ್ಬಂದಿ ಮಾದರಿಯನ್ನು ಗುರುತಿಸಿ ಅನುಮೋದನೆ ನೀಡಲಾಗಿದೆ. ಈ ಎಲ್ಲಾ ಕುಶಲಕರ್ಮಿ ತರಬೇತಿ ಕೇಂದ್ರಗಳಿಗೆ ಬೋಧಕರು ಹಾಗೂ ಸಹಾಯಕ ಬೋಧಕರನ್ನು ನೇಮಿಸುವ ಅವಶ್ಯಕತೆ ಇರುವುದರಿಂದ ಪ್ರತಿ ಕುಶಲಕರ್ಮಿ ತರಬೇತಿ ಸಂಸ್ಥೆಗೆ ಸಂಬಂಧಿಸಿದಂತೆ ವೃತ್ತಿ ಕಲೆಗಳನ್ನು ಗುರುತಿಸಿ, ಸರ್ಕಾರದ ಮಂಜೂರಾತಿ ನೀಡಬೇಕೆಂದು ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 125 ಕೈಸೇವಿ 2003, ಬೆಂಗಳೂರು, ದಿನಾಂಕ:23ನೇ ಜುಲೈ 2004.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ 27 ಜಿಲ್ಲೆಗಳಲ್ಲಿರುವ ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ 'ಅ' ರಲ್ಲಿ ನಮೂದಿಸಿರುವ ವೃತ್ತಿ ಕಲೆಗಳಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಕೈಗಾರಿಕಾ ಸೇವೆಗಳು)

**ಅನುಬಂಧ – 'ಅ'**

**ಸರ್ಕಾರದ ಆದೇಶ ಸಂಖ್ಯೆ:ವಾಕೈ 125 ಕೈಸೇವಿ 2003, ದಿನಾಂಕ: 23ನೇ ಜುಲೈ 2004**

| ಕ್ರಮ ಸಂಖ್ಯೆ | ಜಿಲ್ಲೆ | ಕುಶಲಕರ್ಮಿ ತರಬೇತಿ ಸಂಸ್ಥೆ | ಬೋಧಕರು ವೃತ್ತಿ ಕಲೆ | ಸಹಾಯಕ ಬೋಧಕರು ವೃತ್ತಿ ಕಲೆ |
|---|---|---|---|---|
| 1 | 2 | 3 | 4 | 5 |
| 1) | ಬೆಂಗಳೂರು (ಗ್ರಾಮಾಂತರ) | ಚನ್ನಪಟ್ಟಣ | 1) ಬಡಗಿ<br>2) ಅರಗುಬಣ್ಣ<br>3) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1) ಬಡಗಿ<br>2) ಅರಗುಬಣ್ಣ |
| 2) | ಬೆಂಗಳೂರು (ನಗರ) | ನೆಲಮಂಗಲ | 1) ಬಡಗಿ<br>2) ಅರಗುಬಣ್ಣ<br>3) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ |
| 3) | ಬಾಗಲಕೋಟೆ | ಬಾಗಲಕೋಟೆ | 1) ಬಡಗಿ<br>2) ಆಟೋಮೊಬೈಲ್ | 1) ಶೀಟ್ ಮೆಟಲ್ |
| 4) | ಬೆಳಗಾವಿ | ಬೆಳಗಾವಿ | 1) ಬಡಗಿ<br>2) ಚರ್ಮಗಾರಿಕೆ<br>3) ಆಟೋಮೊಬೈಲ್ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ |
| 5) | ಬಳ್ಳಾರಿ | ಬಳ್ಳಾರಿ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>3) ಪ್ಲಂಬಿಂಗ್ ಮತ್ತು ಸ್ಯಾನಿಟರಿ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ |
| 6) | ಬೀದರ್ | ಬೀದರ್ | 1) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>2) ಚರ್ಮಗಾರಿಕೆ | 1) ಬಡಗಿ |

| 1 | 2 | 3 | 4 | 5 |
|---|---|---|---|---|
| 7) | ಬಿಜಾಪುರ | ಬಿಜಾಪುರ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1) ಚರ್ಮಗಾರಿಕೆ |
| 8) | ಚಾಮರಾಜನಗರ | ಚಾಮರಾಜನಗರ | 1) ಬಡಗಿ<br>2) ಜನರಲ್ ಇಂಜಿನಿಯರಿಂಗ್ | 1) ಐ.ಪಿ.ಸೆಟ್ ಬೋರ್‌ವೆಲ್ |
| 9) | ಚಿಕ್ಕಮಗಳೂರು | ಚಿಕ್ಕಮಗಳೂರು | 1) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>2) ಬೆತ್ತ | 1) ಬಡಗಿ |
| 10) | ಚಿತ್ರದುರ್ಗ | ಚಿತ್ರದುರ್ಗ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1) ಬಡಗಿ |
| 11) | ದಾವಣಗೆರೆ | ದಾವಣಗೆರೆ | 1) ಆಟೋಮೊಬೈಲ್<br>2) ಎಲೆಕ್ಟ್ರಿಕಲ್<br>3) ಜನರಲ್ ಇಂಜಿನಿಯರಿಂಗ್ | 1) ಆಟೋಮೊಬೈಲ್<br>2) ಐ.ಪಿ.ಸೆಟ್/ಬೋರ್‌ವೆಲ್ |
| 12) | ಧಾರವಾಡ | ಹುಬ್ಬಳ್ಳಿ | 1) ಬಡಗಿ<br>2) ಚರ್ಮಗಾರಿಕೆ<br>3) ಆಟೊಮೋಬೈಲ್ | 1) ಬಡಗಿ<br>2) ಚರ್ಮಗಾರಿಕೆ |
| 13) | ಗದಗ್ | ಗದಗ್ | 1) ಬಡಗಿ<br>2)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1) ಎಲೆಕ್ಟ್ರಿಕಲ್ |
| 14) | ಗುಲ್ಬರ್ಗ | ಗುಲ್ಬರ್ಗ | 1) ಬಡಗಿ<br>2)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>3) ಎಲೆಕ್ಟ್ರಿಕಲ್ | 1) ಬಡಗಿ<br>2)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ |
| 15) | ಹಾಸನ | ಹಾಸನ | 1) ಬಡಗಿ<br>2)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1) ಬೆತ್ತ |
| 16) | ಹಾವೇರಿ | ಹಾವೇರಿ | 1) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>2) ಎಲೆಕ್ಟ್ರಿಕಲ್ | 1) ಐ.ಪಿ.ಸೆಟ್/ಬೋರ್‌ವೆಲ್ |
| 17) | ಕಾರವಾರ | ಕುಮಟಾ | 1) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>2)ಬೆತ್ತ | 1) ಬೆತ್ತ |
| 18) | ಕೋಲಾರ | ಚಿಕ್ಕಬಳ್ಳಾಪುರ | 1) ಬಡಗಿ<br>2)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>3) ಚರ್ಮಗಾರಿಕೆ | 1)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>2) ಚರ್ಮಗಾರಿಕೆ |
| 19) | ಕೊಪ್ಪಳ | ಕೊಪ್ಪಳ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ |
| 20) | ಮಡಿಕೇರಿ | ಮಡಿಕೇರಿ | 1) ಆಟೊಮೋಬೈಲ್<br>2) ಜನರಲ್ ಇಂಜಿನಿಯರಿಂಗ್ | 1) ಎಲೆಕ್ಟ್ರಿಕಲ್ |
| 21) | ಮಂಡ್ಯ | ನಾಗಮಂಗಲ | 1) ಬಡಗಿ<br>2) ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್ | 1) ಅರಗು ಬಣ್ಣ |

| 1 | 2 | 3 | 4 | 5 |
|---|---|---|---|---|
| 22) | ಮಂಗಳೂರು | ಬನ್ನಡ್ಕ | 1) ಬಡಗಿ<br>2) ಆಟೊಮೋಬೈಲ್<br>3) ಐ.ಪಿ.ಸೆಟ್ ಮತ್ತು ಎಲೆಕ್ಟ್ರಿಕಲ್ | 1)ಬಡಗಿ<br>2)ಆಟೊಮೋಬೈಲ್ |
| 23 | ಮೈಸೂರು | ಹುಣಸೂರು | 1) ಬಡಗಿ<br>2) ಅಟೊಮೋಬೈಲ್<br>3) ಎಲೆಕ್ಟ್ರಿಕಲ್ | 1) ಬಡಗಿ<br>2) ಎಲೆಕ್ಟ್ರಿಕಲ್ |
| 24) | ರಾಯಚೂರು | ರಾಯಚೂರು | 1)ಜನರಲ್ ಇಂಜಿನಿಯರಿಂಗ್<br>2) ಮೋಟಾರ್ ವೈಂಡಿಂಗ್ | 1) ವೆಲ್ಡಿಂಗ್ |
| 25) | ಶಿವಮೊಗ್ಗ | ಸಾಗರ | 1) ಬಡಗಿ<br>2) ಗಂಧದ ಮರಕೆತ್ತನೆ<br>3) ಬೆತ್ತ | 1)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>2) ಬೆತ್ತ |
| 26) | ತುಮಕೂರು | ತುಮಕೂರು | 1) ಬಡಗಿ<br>2)ಕಮ್ಮಾರಿಕೆ/ ಜನರಲ್ ಇಂಜಿನಿಯರಿಂಗ್<br>3) ಆಟೊಮೋಬೈಲ್ | 1) ಬಡಗಿ<br>2) ಆಟೊಮೋಬೈಲ್ |
| 27) | ಉಡುಪಿ | ಮಲ್ಪೆ | 1) ಆಟೊಮೋಬೈಲ್<br>2) ಎಲೆಕ್ಟ್ರಿಕಲ್ | 1) ಜನರಲ್ ಇಂಜಿನಿಯರಿಂಗ್ |

**ಪದ್ಮಾವತಿ**
ಪಿ.ಆರ್. 813
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಕೈಗಾರಿಕಾ ಸೇವೆಗಳು)

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಶ್ರೀ ಟಿ.ರುದ್ರಯ್ಯ, ರೈಲ್ವೆ ಪಿಎಸ್ಐ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
೧. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ರೈಲ್ವೇಸ್, ಬೆಂಗಳೂರು ರವರ ಆದೇಶ ಸಂಖ್ಯೆ:ಪಿಆರ್/೧೪/೨೦೦೧-೦೨ ದಿನಾಂಕ:೧೩-೯-೨೦೦೨
೨. ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೇಸ್, ಬೆಂಗಳೂರು ರವರ ಆದೇಶ ಸಂಖ್ಯೆ:ಡಿಇ /೧೧/೨೦೦೨ ದಿನಾಂಕ:೧೦-೯-೨೦೦೩.
೩. ಅರ್ಜಿದಾರರ ಮನವಿ ದಿನಾಂಕ:೧೪-೧೧-೨೦೦೩.
೪. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨) ೯೧/೨೦೦೨-೦೩ ದಿನಾಂಕ:೨೫-೩-೨೦೦೪.

**ಪ್ರಸ್ತಾವನೆ:**

ಶ್ರೀ ರುದ್ರಯ್ಯ.ಟಿ., ಎ.ಎಸ್.ಐ., ಎಸ್.ಬಿ.ಸಿ. ಪೊಲೀಸ್ ಠಾಣೆ, ಬೆಂಗಳೂರು ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ ೧೯೬೫ರ ನಿಯಮ ೭ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:**

ಶ್ರೀ ಟಿ.ರುದ್ರಯ್ಯ, ಎಎಸ್ಐ, ಎಸ್‌ಬಿಸಿ ರೈಲ್ವೆ ಪೊಲೀಸ್ ಠಾಣೆಯಲ್ಲಿಕರ್ತವ್ಯ ನಿರ್ವಹಿಸುತ್ತಿರುವಾಗ ದಿನಾಂಕ:೨೪-೫-೨೦೦೧ರಂದು ಚೆನ್ನೈನಿಂದ ಪ್ರಯಾಣಿಸುತ್ತಿದ್ದ ಪ್ರಯಾಣಿಕರೊಬ್ಬರ ಲ್ಯಾಪ್ ಟ್ಯಾಪ್ ಕಂಪ್ಯೂಟರ್ ಕಳ್ಳತನವಾದ ಬಗ್ಗೆ ಪಿರ್ಯಾದು ನೀಡಲು ಠಾಣೆಗೆ ಬಂದಾಗ ಅದನ್ನು ಸ್ವೀಕರಿಸಿ ಪ್ರಕರಣವನ್ನು ದಾಖಲಿಸದೆ ಕರ್ತವ್ಯದಲ್ಲಿ ತೀವ್ರ ದುರ್ನಡತೆಯನ್ನು ಪ್ರದರ್ಶಿಸಿರುವ ಆರೋಪ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ ೧ ವರ್ಷಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಅವರು ಎಸಗಿರುವ ತಪ್ಪಿಗೆ ವಿಧಿಸಿರುವ ಶಿಕ್ಷೆ ಕಡಿಮೆ ಎಂದು ಪರಿಗಣಿಸಿ ಮೇಲ್ಮನವಿ ಪ್ರಾಧಿಕಾರಿ ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಅವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮವಾಗಿ ೩ ವರ್ಷಕಾಲ ತಡೆಹಿಡಿಯುವ ಆದೇಶವನ್ನು ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು ಅವರ ಮುಖ್ಯ ವಾದಾಂಶ ಗಳು ಈ ಕೆಳಕಂಡಂತಿವೆ.

೧. ನಿಯಮ ೬ರಡಿ ಇ ಲಾಖಾ ವಿಚಾರಣೆ ನಡೆಸಿದ್ದರೇ ಸತ್ಯಾಂಶ ಹೊರಬೀಳುತ್ತಿತ್ತು. ತಾನು ನಿರ್ದೋಷಿ ಎಂದು ಸಾಬೀತಾಗುತ್ತಿತ್ತು.

೨. ಮೇಲ್ಮನವಿ ಪ್ರಾಧಿಕಾರಿಗೆ ಶಿಕ್ಷೆ ಹೆಚ್ಚಿಸಲು ಅಧಿಕಾರವಿಲ್ಲ.

೩. ಭಾರತ ಸಂವಿಧಾನದ ಅನುಚ್ಛೇದ ೩೧೧ ಪ್ರಕಾರ ತನ್ನನ್ನು ಪ್ರತಿರಕ್ಷಿಸಿಕೊಳ್ಳಲು ಅವಕಾಶ ನೀಡಿಲ್ಲ.

೪. ಫಿರ್ಯಾದುದಾರರಾದ ಶ್ರೀಕಾಂತ್‌ರವರು ಯಾರಿಗೆ ದೂರು ನೀಡಿದ್ದಾರೆ, ಯಾರನ್ನು ಸಂಪರ್ಕಿಸಿದ್ದಾರೆ ಅನ್ನುವುದು ಸ್ಪಷ್ಟವಿಲ್ಲ.

೫. ತಾನು ನಿವೃತ್ತಿಯ ಅಂಚಿನಲ್ಲಿದ್ದು, ಶಿಕ್ಷೆಯಿಂದಾಗಿ ಅತ್ಯಂತ ಆರ್ಥಿಕ ನಷ್ಟ ಹೊಂದಿರುತ್ತೇನೆ.

ಯಾವ ನಿಯಮದಡಿ ಇ ಲಾಖಾ ವಿಚಾರಣೆ ನಡೆಸಬೇಕೆನ್ನುವುದು ಶಿಸ್ತು ಪ್ರಾಧಿಕಾರಿಯ ವಿವೇಚನೆಗೆ ಬಿಟ್ಟ ವಿಷಯ. ಮೇಲ್ಮನವಿ ಪ್ರಾಧಿಕಾರಿ ಶಿಕ್ಷೆ ಹೆಚ್ಚಿಸಿರುವುದು ನಿಯಮಬದ್ಧವಾಗಿದೆ. ಅರ್ಜಿದಾರರು ಶ್ರೀಕಾಂತ್ ಎಂಬುವವರು ತಮ್ಮ ಲ್ಯಾಪ್ ಟ್ಯಾಪ್ ಕಳುವಾದ ಬಗ್ಗೆ ನೀಡಿದ ಫಿರ್ಯಾದನ್ನು ಸ್ವೀಕರಿಸದೇ ಅಲ್ಲಿಂದಿಲ್ಲಿಗೆ ಓಡಾಡಿಸಿರುವುದು ಸ್ಪಷ್ಟವಾಗಿದೆ. ಇ ದಕ್ಕೆ ಅವರಿಗೆ ವಿಧಿಸಿರುವ ಶಿಕ್ಷೆ ಸೂಕ್ತವಾಗಿದೆ ಎಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೯೯ ಪೊಸಿಅ ೨೦೦೪, ಬೆಂಗಳೂರು, ದಿನಾಂಕ: ೨೩ನೇ ಜುಲೈ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ ೧೯೬೫ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ರುದ್ರಯ್ಯ, ಎಎಸ್‌ಐ, ಎಸ್‌ಬಿಸಿ ಪೋಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 814 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಜಿಲ್ಲಾ ಮುಖ್ಯ ರಸ್ತೆಗಳನ್ನು ಪುನರ್‌ವ್ಯವಸ್ಥೆಗೊಳಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ ಲೋಇ 3 ಮಾತಂಕೋ 2003 ದಿನಾಂಕ 24–1–2003.

**ಪ್ರಸ್ತಾವನೆ:**

ರಾಜ್ಯದಲ್ಲಿ ಪ್ರಸ್ತುತ 38,247 ಕಿ.ಮೀ. ಉದ್ದದ ಜಿಲ್ಲಾ ಮುಖ್ಯ ರಸ್ತೆಯ ಜಾಲವು ಇರುತ್ತದೆ. ರಾಜ್ಯದ ಹಲವಾರು ಗ್ರಾಮೀಣ ರಸ್ತೆಗಳನ್ನು ಕಾಲಕಾಲಕ್ಕೆ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ವರ್ಗೀಕರಿಸಲಾಗಿದ್ದು, ಸದ್ಯ ಜಿಲ್ಲಾ ಮುಖ್ಯ ರಸ್ತೆಗಳ ಸಂಖ್ಯೆ ಒಟ್ಟು 2309 ಇರುತ್ತದೆ. ಈ ಜಿಲ್ಲಾ ಮುಖ್ಯ ರಸ್ತೆಗಳು ವಾಸ್ತವವಾಗಿ ಅನೇಕ ಹಳ್ಳಿ:ಪಟ್ಟಣಗಳಿಗೆ ಸಂಪರ್ಕ ಕಲ್ಪಿಸುತ್ತಲಿವೆ. ಆದರೆ ಇವು ಕಡಿಮೆ ಉದ್ದಳತೆಯ ರಸ್ತೆಗಳಾಗಿಯೇ ಉಳಿದಿವೆ. ಈ ಅಂಶವನ್ನು ಈ ಕೆಳಗಿನ ಕೋಷ್ಟಕದಿಂದ ಮನಗಾಣಬಹುದು.

| ಕ್ರಮ ಸಂಖ್ಯೆ | ವಿವರ | ಜಿಲ್ಲಾ ಮುಖ್ಯ ರಸ್ತೆಗಳ ಸಂಖ್ಯೆ | | |
|---|---|---|---|---|
| | | ಸಂಪರ್ಕ ಮತ್ತು ಕಟ್ಟಡ (ಉತ್ತರ) ವಲಯ | ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ವಲಯ | ಒಟ್ಟು |
| 1. | ಒಂದೇ ತಾಲ್ಲೂಕಿನಲ್ಲಿ ಪ್ರಾರಂಭವಾಗಿ ಅದೇ ತಾಲ್ಲೂಕಿನಲ್ಲಿ ಮುಕ್ತಾಯ ವಾಗುವ ಜಿ.ಮು.ರಸ್ತೆಗಳ ಸಂಖ್ಯೆ | 896 | 1153 | 2049 |
| 2. | ಎರಡು ತಾಲ್ಲೂಕುಗಳಲ್ಲಿ ಹಾಯ್ದು ಹೋಗುವ ಜಿ.ಮು.ರಸ್ತೆಗಳ ಸಂಖ್ಯೆ | 82 | 154 | 236 |
| 3. | ಮೂರು ತಾಲ್ಲೂಕುಗಳಲ್ಲಿ ಹಾಯ್ದು ಹೋಗುವ ಜಿ.ಮು.ರಸ್ತೆಗಳ ಸಂಖ್ಯೆ | 3 | 17 | 20 |
| 4. | ನಾಲ್ಕು ತಾಲ್ಲೂಕುಗಳಲ್ಲಿ ಹಾಯ್ದು ಹೋಗುವ ಜಿ.ಮು.ರಸ್ತೆಗಳ ಸಂಖ್ಯೆ | 3 | 1 | 4 |
| | **ಒಟ್ಟು ಜಿ.ಮು.ರಸ್ತೆಗಳ ಸಂಖ್ಯೆ** | **984** | **1325** | **2309** |

ಈ ರೀತಿ ರಾಜ್ಯದ 2309 ಜಿಲ್ಲಾ ಮುಖ್ಯ ರಸ್ತೆಗಳಲ್ಲಿ 2049 ರಸ್ತೆಗಳು ಒಂದೇ ತಾಲ್ಲೂಕಿನಲ್ಲಿ ಪ್ರಾರಂಭವಾಗಿ ಅದೇ ತಾಲ್ಲೂಕಿನಲ್ಲಿ ಮುಕ್ತಾಯವಾಗುತ್ತವೆ. ಅಂದರೆ ರಾಜ್ಯದಲ್ಲಿ ಸದ್ಯ ಇರುವ ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ಸುಮಾರು 89 ಪ್ರತಿಶತದಷ್ಟು ಜಿಲ್ಲಾ ಮುಖ್ಯ ರಸ್ತೆಗಳು ಎರಡು ತಾಲ್ಲೂಕುಗಳಿಗೂ ಕೂಡ ಸಂಪರ್ಕವನ್ನು ಕಲ್ಪಿಸುತ್ತಿಲ್ಲ.

ಆದುದರಿಂದ ಜಿಲ್ಲಾ ಮುಖ್ಯ ರಸ್ತೆಗಳು ಜಿಲ್ಲೆಯ ವಿವಿಧ ತಾಲ್ಲೂಲ್ಲೂಕುಗಳಿಗೆ ಸಂಪರ್ಕ ಒದಗಿಸಬೇಕು ಎನ್ನುವ ಮೂಲಭೂತ ಗುಣಧರ್ಮದ ಪಾಲನೆಯಾಗುತ್ತಿಲ್ಲ. ಜಿಲ್ಲಾ ಮುಖ್ಯ ರಸ್ತೆಗಳು ಜಿಲ್ಲೆಯ ಹಲವು ತಾಲ್ಲೂಕುಗಳಲ್ಲಿ ಹಾಯ್ದುಹೋಗಬೇಕು ಹಾಗೂ ಜಿಲ್ಲಾ ಕೇಂದ್ರಸ್ಥಾನ, ತಾಲ್ಲೂಕು ಕೇಂದ್ರಸ್ಥಾನ, ಮಾರುಕಟ್ಟೆ ಪ್ರದೇಶ, ಐತಿಹಾಸಿಕ ಸ್ಥಳಗಳು,

ಔದ್ಯೋಗಿಕ ಪ್ರದೇಶಗಳನ್ನು ಸಂಪರ್ಕಿಸುವಂತಾಗಿರಬೇಕು. ಆದುದರಿಂದ ಈಗಿರುವ ಜಿಲ್ಲಾ ಮುಖ್ಯ ರಸ್ತೆಗಳನ್ನು ಪುನರ್ವ್ಯವಸ್ಥೆಗೊಳಿಸಬೇಕಾಗಿದೆ.

ಈ ನಿಟ್ಟಿನಲ್ಲಿ ಈಗಿರುವ ಜಿಲ್ಲಾ ಮುಖ್ಯ ರಸ್ತೆಗಳನ್ನು ಸಾಧ್ಯವಿರುವಲ್ಲೆಲ್ಲಾ ಒಂದಕ್ಕೊಂದು ಜೋಡಿಸಿ ಹೆಚ್ಚಿನ ಉದ್ದದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಪುನರ್ ವ್ಯವಸ್ಥೆಗೊಳಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು, ಉತ್ತರ ಹಾಗೂ ದಕ್ಷಿಣ ವಲಯ ಇವರುಗಳಿಗೆ ಸೂಚಿಸಲಾಗಿತ್ತು ಇದರಿಂದ ಈಗಿರುವ ಜಿಲ್ಲಾ ಮುಖ್ಯ ರಸ್ತೆಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿ ಅವುಗಳ ಅಂಕಿಸಂಖ್ಯೆಗಳ ನಿರ್ವಹಣೆಯೂ ಸರಳಗೊಳ್ಳುವುದು. ಭವಿಷ್ಯದಲ್ಲಿ ಈ ರಸ್ತೆಗಳ ಮೇಲಿನ ವಾಹನ ದಟ್ಟಣೆಯನ್ನು ವೀಕ್ಷಿಸಿ ಇವುಗಳನ್ನು ನೇರವಾಗಿ ರಾಜ್ಯ ಹೆದ್ದಾರಿಗಳನ್ನಾಗಿ ಪರಿವರ್ತಿಸಲೂ ಇದರಿಂದ ಸರಳ ವ್ಯವಸ್ಥೆ ಸೃಜಿಸಿದಂತಾಗುತ್ತದೆ. ಇದಲ್ಲದೇ ಪ್ರಸ್ತುತ ಜಿಲ್ಲಾ ಮುಖ್ಯ ರಸ್ತೆಗಳಿಗೆ ಯಾವುದೇ ನಾಮಾಂಕಿತ ಸಂಖ್ಯೆ ಇರುವುದಿಲ್ಲ. ಇದರಿಂದಾಗಿ ಗಣಕೀಕೃತ ನಕ್ಷೆ ಹಾಗೂ ಡೇಟಾಬೇಸ್‌ನಲ್ಲಿ ಸರಿಯಾಗಿ ಗುರುತಿಸುವುದು ಸಾಧ್ಯವಾಗುವುದಿಲ್ಲ. ಆದುದರಿಂದ ಈ ಜಿಲ್ಲಾ ಮುಖ್ಯ ರಸ್ತೆಗಳಿಗೆ ಸರಿಯಾದ ನಾಮಾಂಕಿತ ಸಂಖ್ಯೆ ನೀಡುವುದೂ ಸಹ ಅವಶ್ಯವಿರುತ್ತದೆ.

ಆದ ಕಾರಣ ರಾಜ್ಯದಲ್ಲಿ ಪ್ರಸ್ತುತ ಇರುವ ಜಿಲ್ಲಾ ಮುಖ್ಯ ರಸ್ತೆಗಳನ್ನು ಪುನರ್‌ವ್ಯವಸ್ಥೆಗೊಳಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋ.ಇ. 3 ಮಾ.ತಂ.ಕೋ. 2003, ಬೆಂಗಳೂರು ದಿನಾಂಕ 17ನೇ ಜುಲೈ 2004**

ರಾಜ್ಯದಲ್ಲಿ ಈಗಿರುವ ಹಲವಾರು ಜಿಲ್ಲಾ ಮುಖ್ಯ ರಸ್ತೆಗಳನ್ನು ಸಾಧ್ಯವಿರುವಲ್ಲೆಲ್ಲಾ ಒಂದಕ್ಕೊಂದು ಸಂಪರ್ಕವಿರುವಂತೆ ಜೋಡಿಸಿ ಹೆಚ್ಚಿನ ಉದ್ದವುಳ್ಳ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಪುನರ್‌ವ್ಯವಸ್ಥೆಗೊಳಿಸಿ ಮರು ನಾಮಕರಣಗೊಳಿಸಲು ಹಾಗೂ ಅವುಗಳಿಗೆ ನಾಮಾಂಕಿತ ಸಂಖ್ಯೆ ನೀಡಲು ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

**ಪಿ.ಆರ್. 815** **ಆರ್.ಮಂಜುಳ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ನಬಾರ್ಡ್).

**ವಿಷಯಃ** ರಾಜ್ಯ ಹೆದ್ದಾರಿಗಳ ನಾಮಾಂಕಿತ ಹಾಗೂ ಉದ್ದದ ತಿದ್ದುಪಡಿ ಕುರಿತು

**ಉಲ್ಲೇಖಃ** ಸರ್ಕಾರದ ಆದೇಶ ಸಂಖ್ಯೆ: ಲೋ.ಇ. 15 ಮಾ.ತಂ.ಕೋ. 2003, ಬೆಂಗಳೂರು ದಿನಾಂಕ 18-05-2004

**ಪ್ರಸ್ತಾವನೆ:**

ಉಲ್ಲೇಖದಲ್ಲಿನ ಸರ್ಕಾರಿ ಆದೇಶದ ಮೂಲಕ ರಾಜ್ಯದಲ್ಲಿನ ಎಲ್ಲಾ ರಾಜ್ಯ ಹೆದ್ದಾರಿಗಳನ್ನು ಪುನರ್ವ್ಯವಸ್ಥೆಗೊಳಿಸಲಾಗಿದೆ. ಆದರೆ, ಕಾರಣಾಂತರಗಳಿಂದ ಈ ಪಟ್ಟಿಯಲ್ಲಿ ಹಾಲಿ ಇರುವ ರಾಜ್ಯ ಹೆದ್ದಾರಿ (ಸಂಖ್ಯೆ 25ಎ)ಯು ಬಿಟ್ಟುಹೋಗಿದ್ದು ಇದನ್ನು ರಾಜ್ಯ ಹೆದ್ದಾರಿ 65ರಲ್ಲಿ ವಿಲೀನಗೊಳಿಸಬೇಕಿದೆ. ಇನ್ನು ಕೆಲವು ರಾಜ್ಯ ಹೆದ್ದಾರಿಗಳ ವಿವರಣೆಗಳಲ್ಲಿ ಹಾದುಹೋಗುವ ಸ್ಥಳಗಳು ಸರಿಯಾಗಿ ನಮೂದಾಗಿರಬೇಕಿರುತ್ತದೆ. ಈ ರೀತಿಯ ಕೆಲವೊಂದು ಮುದ್ರಣ ಲೋಪದೋಷಗಳಾಗಿರುವುದರಿಂದ ಇವುಗಳನ್ನು ಸರಿಪಡಿಸಿ ಆದೇಶ ಹೊರಡಿಸಬೇಕಾಗಿರುತ್ತದೆ. ಕಾರಣ, ಈ ಕೆಳಗಿನ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋ.ಇ. 15 ಮಾ.ತಂ.ಕೋ. 2003, ಬೆಂಗಳೂರು ದಿನಾಂಕ 16ನೇ ಜುಲೈ 2004**

ರಾಜ್ಯ ಹೆದ್ದಾರಿಗಳನ್ನು ಪುನರ್ವ್ಯವಸ್ಥೆಗೊಳಿಸಿ ಹೊರಡಿಸಲಾದ ದಿನಾಂಕ 18-05-2004ರ ಇದೇ ಸಮಸಂಖ್ಯೆಯ ಸರ್ಕಾರದ ಆದೇಶದಲ್ಲಿನ ಅನುಬಂಧದಲ್ಲಿ ತೋರಿಸಿರುವ ರಾಜ್ಯ ಹೆದ್ದಾರಿಗಳಲ್ಲಿ ಕೆಲವು ರಾಜ್ಯ ಹೆದ್ದಾರಿಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ಬದಲಾವಣೆ ಮಾಡಿ ರಾಜ್ಯ ಹೆದ್ದಾರಿಗಳೆಂದು ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

**ಆರ್.ಮಂಜುಳ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ನಬಾರ್ಡ್).

**ಅನುಬಂಧ**

**(ಸರ್ಕಾರದ ಆದೇಶ ಸಂಖ್ಯೆ: ಲೋ.ಇ. 15 ಮಾ.ತಂ.ಕೋ. 2003, ಬೆಂಗಳೂರು ದಿನಾಂಕ 16ನೇ ಜುಲೈ 2004)**

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳ ವಿವರ | ರಾಜ್ಯ ಹೆದ್ದಾರಿಯ ಉದ್ದ (ಕಿ.ಮೀ.) |
|---|---|---|---|
| 1 | 2 | 3 | 4 |
| 1 | 1 | ಪಡುಬಿದ್ರಿ ಚಿಕ್ಕಲಗುಡ ರಾಜ್ಯ ಹೆದ್ದಾರಿ (ಕಾರ್ಕಳ, ಆಗುಂಬೆ, ತೀರ್ಥಹಳ್ಳಿ, ಆನಂದಪುರ, ಹಾನಗಲ್, ತಡಸ, ಕಲಘಟಗಿ, ಧಾರವಾಡ, ಉಪ್ಪಿನಬೆಟಗೇರಿ, ಬೆಳವಡಿ, ಬೈಲಹೊಂಗಲ, ವಣ್ಣೂರ ಹೊಸಕೋಟೆ, ಅಂಕಲಗಿ, ಬಸಾಪುರ, ಹಿಡಕಲ್ ಡ್ಯಾಂ, ಹೊಸೂರು ಮೂಲಕ ರಾಷ್ಟ್ರೀಯ ಹೆದ್ದಾರಿ 4 ರವರೆಗೆ) | 450 |

| 1 | 2 | 3 | 4 |
|---|---|---|---|
| 2 | 8 | ಹಿರಿಸಾವೆ ಚೆಟ್ಟಳ್ಳಿ ರಾಜ್ಯ ಹೆದ್ದಾರಿ (ಶ್ರವಣಬೆಳಗೊಳ, ಚನ್ನರಾಯಪಟ್ಟಣ, ಹೊಳೆನರಸೀಪುರ, ಅರಕಲಗೂಡು, ಶನಿವಾರಸಂತೆ, ಚಂಗಡಹಳ್ಳಿ, ವಣಗೂರು, ಕುಂದಳ್ಳಿ, ಶಾಂತಳ್ಳಿ, ತಲ್ತಾರ್ ಶೆಟ್ಟಳ್ಳಿ, ತಾಕೇರಿ, ಬಿಳಿಗೇರಿ, ಕುಂಬೂರು, ಶುಂಠಿಕೊಪ್ಪ ಮೂಲಕ) | 170 |
| 3 | 28 | ಸೂಪಾ ಅಣ್ಣಿಗೇರಿ ರಾಜ್ಯ ಹೆದ್ದಾರಿ (ಹಳಿಯಾಳ, ಧಾರವಾಡ, ಹೆಬಸೂರು ಮೂಲಕ) | 112 |
| 4 | 44 | ಸಂಕೇಶ್ವರ ಸಂಗಮ ರಾಜ್ಯ ಹೆದ್ದಾರಿ (ಹುಕ್ಕೇರಿ, ಘಟಪ್ರಭ, ಅರಭಾವಿ, ಲೋಕಾಪುರ, ಕೆರಕಲಮಟ್ಟಿ, ಅಗಸನಕೊಪ್ಪ, ಗುಳೇದಗುಡ್ಡ, ಕಮತಗಿ, ಗುಳೂರು ಮೂಲಕ) | 198 |
| 5 | 65 | ಮಲ್ಪೆ ಮೊಳಕಾಲ್ಮೂರು ರಾಜ್ಯ ಹೆದ್ದಾರಿ (ಉಡುಪಿ, ಹೆಬ್ರಿ, ಆಗುಂಬೆ, ಬೇಗಾರ್, ಕೊಪ್ಪ, ನರಸಿಂಹರಾಜಪುರ, ಸೂಲಗೇರಿ, ಭದ್ರಾವತಿ, ಚನ್ನಗಿರಿ, ಶಾಂತಿಸಾಗರ, ದಾವಣಗೆರೆ, ಜಗಳೂರು, ಮುಷ್ಟೂರು, ಬಿ.ಜಿ.ಕೆರೆ ಮೂಲಕ) | 340 |
| 6 | 73 | ಮಂಗಸೂಳಿ ಲಕ್ಷ್ಮೇಶ್ವರ ರಾಜ್ಯ ಹೆದ್ದಾರಿ (ಉಗಾರ, ಕುಡುಚಿ, ರಾಯಬಾಗ, ಕಬ್ಬೂರ, ಬೆಲ್ಲದ ಬಾಗೇವಾಡಿ, ಘಟಪ್ರಭ, ಗೊಡಚಿನಮಲ್ಕಿ, ಪಾಶ್ಚಾಪೂರ, ಅಕ್ಕತಂಗೇರಹಾಳ, ನೇಸರಗಿ, ದೇಶನೂರು, ಸುತಗಟ್ಟಿ, ಮತ್ತಿಕೊಪ್ಪ, ಸಂಪಗಾಂವ್, ನೇಗಿನಹಾಳ್, ನಯಾನಗರ, ಬೆಳವಡಿ, ಬುಡರಗಟ್ಟಿ, ತಡಕೋಡ, ಮಮ್ಮಿಗಟ್ಟಿ, ಧಾರವಾಡ, ರಾಷ್ಟ್ರೀಯ ಹೆದ್ದಾರಿ 4 ರ ಉಳಿಕೆ ಭಾಗ ಸೇರಿಸಿ ಹುಬ್ಬಳ್ಳಿ, ಕುಂದಗೋಳ ಮೂಲಕ) | 300 |
| 7 | 81 | ಯಳಂದೂರು ಗುಂಡ್ಲುಪೇಟೆ ರಾಜ್ಯ ಹೆದ್ದಾರಿ (ಹೊಂಗನೂರು, ಚಾಮರಾಜನಗರ, ತೆರಕಣಾಂಬಿ ಮೂಲಕ) | 55 |
| 8 | 82 | ಹೊಸಕೋಟೆ ಗೌನಿಪಲ್ಲಿ ರಾಜ್ಯ ಹೆದ್ದಾರಿ (ಚಿಂತಾಮಣಿ ಮೂಲಕ ಆಂಧ್ರ ಪ್ರದೇಶ ರಾಜ್ಯ ಗಡಿಯವರೆಗೆ) | 88 |
| 9 | 83 | ಮುನೋಳಿ ಕೋಟುಮಚಗಿ ರಾಜ್ಯ ಹೆದ್ದಾರಿ (ಕಡಕೋಳ, ಗೊಡಚಿ, ಸಾಲಹಳ್ಳಿ, ಕೊಣ್ಣೂರು ಶಿರೋಳ, ಹೊಳೆಆಲೂರು, ರೋಣ, ಅಬ್ಬೀಗೆರೆ ಮೂಲಕ) | 121 |

**ಆರ್.ಮಂಜುಳ**

ಪಿ.ಆರ್. 816 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ನಬಾರ್ಡ್).

**ಕಂದಾಯ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಕಂ.ಇ. 28 ಮುನೋಸೋ 2004, ಬೆಂಗಳೂರು, ದಿನಾಂಕ: 9ನೇ ಜುಲೈ 2004**

**ವಿಷಯ:** ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 13ರನ್ವಯ ದಾಖಲೆಗಳನ್ನು ಕಾಯ್ದಿರಿಸುವ ಬಗ್ಗೆ.

ರಾಜ್ಯದ ಕೆಲವು ಜಿಲ್ಲಾ ನೊಂದಣಾಧಿಕಾರಿಗಳ ಕಛೇರಿಯಲ್ಲಿ ಈಗಾಗಲೇ ಸಾವಿರಾರು ಸಂಘಗಳು ನೋಂದಣಿಯಾಗಿದ್ದು, ಪ್ರತಿ ವರ್ಷವೂ ಸಾವಿರಾರು ಹೊಸ ಹೊಸ ಸಂಘಗಳು ನೊಂದಣಿಯಾಗುತ್ತಿದ್ದು, ಈ ಸಂಘಗಳು ಒದಗಿಸುವ ದಾಖಲೆ ಪತ್ರಗಳ ಪೈಕಿ ಕೆಲವು ಪ್ರಾಮುಖ್ಯವಲ್ಲದೇ ಇರುವಂತವುಗಳನ್ನು 10 ವರ್ಷಗಳ ನಂತರ ಪರಿಶೀಲಿಸಿ ನಾಶಪಡಿಸಬಹುದಾಗಿದ್ದು, ಈ ಬಗ್ಗೆ ಸಂಘಗಳ ನೋಂದಣಾಧಿಕಾರಿಗಳು ಅನುಸರಿಸಬೇಕಾದ ವಿಧಾನದ ಕುರಿತು, ಈ ಕೆಳಕಂಡ ಮಾರ್ಗ ಸೂಚನೆಗಳನ್ನು ಅನುಸರಿಸಲು ಸೂಚಿಸಲಾಗಿದೆ.

The period of preservation of these records can be classified into two categories based upon their importance.

**I. Records to be preserved permanently:-**

The following records may be preserved permanently as they are important documents for the existence and functioning of a society:-

a) Approved bye-law of society (Memorandum of Association and Rules and Regulations)
b) List of governing body/committee members relating to each year of filing.
c) Amendments to Bye-law, if any.
d) Certificate of Registration.

**II. Records which may be preserved up to 10 years:-**

The following records may be preserved for a period of 10 years from the date of filing.

a) Copies of Audited Balance sheet, and income and expenditure account, filed under section 13 of KSR Act, 1960.
b) Additional records filed under Rule 7(2) of KSR Rules.

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ,

ಪಿ.ಆರ್. 817 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ನವೋದಯ ವಿದ್ಯಾ ಸಂಘ (ರಿ) ಚನ್ನರಾಯಪಟ್ಟಣ, ಈ ಸಂಘಕ್ಕೆ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕಂಇ 48 ಮುನೊಸೊ 2000, ದಿನಾಂಕ:16-6-2001.
2. ಸರ್ಕಾರದ ಆದೇಶ ಸಂಖ್ಯೆ:ಕಂಇ 48 ಮುನೊಸೊ 2000, ದಿನಾಂಕ:4-9-2003.
3. ಸರ್ಕಾರದ ಆದೇಶ ಸಂಖ್ಯೆ:ಕಂಇ 57 ಮುನೊಸೊ 2003, ದಿನಾಂಕ:8-1-2004.
4. ಆಡಳಿತಾಧಿಕಾರಿ, ನವೋದಯ ವಿದ್ಯಾ ಸಂಘ (ರಿ) ರವರ ಪತ್ರ ಸಂಖ್ಯೆ:ಅಅ:01:04-05, ದಿನಾಂಕ:9-6-2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ನವೋದಯ ವಿದ್ಯಾ ಸಂಸ್ಥೆ (ರಿ), ಚನ್ನರಾಯಪಟ್ಟಣ, ಈ ಸಂಘಕ್ಕೆ ಸಂಘದ ಹಿತದೃಷ್ಟಿಯಿಂದ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎರ ಪ್ರಕಾರ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ತದನಂತರ ಕಾಲಕಾಲಕ್ಕೆ ಮೇಲೆ ಓದಲಾದ (2) ಮತ್ತು (3)ರ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:15-6-2004ರವರೆಗೆ ವಿಸ್ತರಿಸಲಾಗಿದೆ. ಮೇಲೆ ಓದಲಾದ-(4)ರಲ್ಲಿ ಸಂಘದ ಆಡಳಿತಾಧಿಕಾರಿಯವರು ನೀಡಿರುವ ವರದಿಯನ್ನು ಸರ್ಕಾರವು ಪರಿಶೀಲಿಸಿದ್ದು, ದಿನಾಂಕ:16-6-2004 ರಿಂದ ಮತ್ತೇ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 57 ಮುನೋಸೋ 2003, ಬೆಂಗಳೂರು, ದಿನಾಂಕ: 23ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ನವೋದಯ ವಿದ್ಯಾ ಸಂಘ (ರಿ), ಚನ್ನರಾಯಪಟ್ಟಣ, ಈ ಸಂಘಕ್ಕೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:16-6-2004 ರಿಂದ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಈ ವಿಸ್ತರಿಸಿದ ಅವಧಿಯೊಳಗೆ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಸೂಕ್ತ ಕ್ರಮ ತೆಗೆದು ಕೊಳ್ಳಬೇಕೆಂದು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 818

**ENERGY SECRETARIAT**

**CORRIGENDUM**

**No. DE 224 NCE 2004, Bangalore, Dated 26th July 2004**

In Government Order No : DE 224 NCE 2004, dated : 14.7.2004 wherever the words and figure appears as M/s Rajesh Construction Company Limited" and "I Acres" should be read as "M/s Rajesh Construction Company" and "2 Acres".

By Order and in the name of the Governor of Karnataka,

**K.L. JAYARAM**

Under Secretary to Government, Energy Department.

P.R. 820

**ಆರ್ಥಿಕ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಆಇ 2 ಬಿಇಎಂ 2003, ಬೆಂಗಳೂರು, ದಿನಾಂಕ: 20ನೇ ಜುಲೈ 2004**

**ವಿಷಯ:** ಸರ್ಕಾರದ ವೆಚ್ಚಗಳಲ್ಲಿ ಮಿತವ್ಯಯ ಕ್ರಮಗಳು.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:ಆಇ 2 ಬಿಇಎಂ 2003, ದಿನಾಂಕ:5.7.2004.

ಉಲ್ಲೇಖಿತ ದಿನಾಂಕ 5.7.2004ರ ಸರ್ಕಾರದ ಆದೇಶದ ಕ್ರಮ ಸಂಖ್ಯೆ (ಉ) ದಲ್ಲಿ "ಪೆಟ್ರೋಲ್, ತೈಲ, ಲೂಬ್ರಿಕೆಂಟ್ಸ್ ಹಾಗೂ ಲೇಖನ ಸಾಮಗ್ರಿಗಳಿಗೆ ಆಯವ್ಯಯದಲ್ಲಿ ಅವಕಾಶ ಮಾಡಿದ್ದಲ್ಲಿ ವೆಚ್ಚ ಮಾಡಬಹುದಾಗಿದೆ" ಎಂಬುದನ್ನು "ಪೆಟ್ರೋಲ್, ತೈಲ, ಲೂಬ್ರಿಕೆಂಟ್ಸ್, ದೂರವಾಣಿ ಹಾಗೂ ಲೇಖನ ಸಾಮಗ್ರಿಗಳಿಗೆ ಆಯವ್ಯಯದಲ್ಲಿ ಅವಕಾಶ ಮಾಡಿದ್ದಲ್ಲಿ ವೆಚ್ಚ ಮಾಡಬಹುದಾಗಿದೆ" ಎಂದು ಓದಿಕೊಳ್ಳುವುದು.

**ಟಿ.ಪಿ. ನರಸಿಂಗ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣಾ ಮತ್ತು ಗಣಕ ಕೋಶ)

ಪಿ.ಆರ್. 823

## ಶಿಕ್ಷಣ ಸಚಿವಾಲಯ

**ವಿಷಯ:** 2004-05 ನೇ ಸಾಲಿನ ಶಾಲಾ ಉಚಿತ ಪಠ್ಯಪುಸ್ತಕಗಳು ಹಾಗೂ 2005-06 ಹಾಗೂ ನಂತರದ ಸಾಲಿನ ಉಚಿತ ಹಾಗೂ ಮಾರಾಟದ ಪಠ್ಯಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸುವ ಯೋಜನೆಗೆ(project) ಮಂಜೂರಾತಿ ನೀಡುವ ವಿಚಾರ.

**ಓದಲಾಗಿದೆ:**
1. ದಿ:2.4.2004ರ ಸರ್ಕಾರಿ ಆದೇಶ ಸಂ:ಇ ಡಿ 51 ಪಿಎಂಎ 2004
2. ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಅವರ ಕಚೇರಿಯ ದಿ:30.4.2004ರ ಪತ್ರ ಸಂ:ಪಿ (ಡಿ)17:2003-04

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಕಾಣಿಸಿದ ದಿ:2.4.2004 ರ ಸರ್ಕಾರಿ ಆದೇಶದಲ್ಲಿ 2.5 ಕೋಟಿ ಪಠ್ಯಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸುವ ವಿಚಾರಕ್ಕೆ ಸಂಬಂಧಿಸಿದಂತೆ ಕೆಲವು ಷರತ್ತಿಗೊಳಪಟ್ಟು 20.00 ಕೋಟಿ ರೂ.ಗಳ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿತ್ತು.

ಕ್ರಮ ಸಂಖ್ಯೆ (2) ರಲ್ಲಿ ಕಾಣಿಸಿದ ದಿನಾಂಕ:30.4.2004 ರ ಪತ್ರದಲ್ಲಿ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇ ಲಾಖೆ, ಅವರು ಈ ಯೋಜನೆಗೆ ಸಂಬಂಧಿಸಿದಂತೆ ಈ ಕೆಳಕಂಡ ಅಂಶಗಳಿಗೆ ಸೀಮಿತಗೊಳಿಸಿ ಒಟ್ಟು 21.00 ಕೋಟಿ ರೂ.ಗಳ ಪ್ರಸ್ತಾವನೆಯನ್ನು ಕಳುಹಿಸಿದ್ದಾರೆ.

| | | | |
|---|---|---|---|
| 1. | ಯಂತ್ರೋಪಕರಣ ಖರೀದಿಗಾಗಿ | - | 10.00 ಕೋಟಿ ರೂ. |
| 2. | ಕಾಗದ ಖರೀದಿಗೆ | - | 6.00 ಕೋಟಿ ರೂ. |
| 3. | ಪೀಸ್ ವರ್ಕ್ ವೇಜಸ್ | - | 2.00 ಕೋಟಿ ರೂ. |
| 4. | ಇ ತರೆ ವೆಚ್ಚಗಳು (outwork expenses) | - | 2.00 ಕೋಟಿ ರೂ. |
| 5. | ಸಾಗಾಣಿಕೆ ಮತ್ತು ನಿರ್ವಹಣೆ ವೆಚ್ಚ (Transportation & handling) | - | 1.00 ಕೋಟಿ ರೂ. |
| | **ಒಟ್ಟು** | - | **21.00 ಕೋಟಿ ರೂ.** |

ಸರ್ಕಾರವು ಈ ಅಂಶವನ್ನು ಕೂಲಂಕಷವಾಗಿ ಪರಿಶೀಲಿಸಿ 2004 ನೇ ಸಾಲಿನ ಶೇ.60 ರಷ್ಟು ಕಲರ್ ಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯದ ಹೊರಗೆ ಮುದ್ರಿಸುವುದರಿಂದ ಪೀಸ್‌ವರ್ಕ್ ಗೆ ಸೂಚಿಸಿದ 2.00 ಕೋಟಿ ರೂ.ಹೆಚ್ಚೆಂದು ಪರಿಗಣಿಸಿ, ಇ ದನ್ನು ರೂ.50.00 ಲಕ್ಷಗಳಿಗೆ ಮಿತಿಗೊಳಿಸಲು ಹಾಗೂ ಇ ತರೆ ವೆಚ್ಚಗಳಿಗಾಗಿ(outwork) ಸೂಚಿಸಿದ ರೂ.2.00 ಕೋಟಿ ವೆಚ್ಚವು ಅಧಿಕವೆಂದು ಪರಿಗಣಿಸಿ, ಇ ದನ್ನು ರೂ.1.00 ಕೋಟಿಗೆ ಮಿತಿಗೊಳಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ 61 ಡಿಜಿಓ 2004 ಬೆಂಗಳೂರು, ದಿನಾಂಕ:05ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ 2004-05 ನೇ ಸಾಲಿನ ಶಾಲಾ ಉಚಿತ ಪಠ್ಯಪುಸ್ತಕಗಳು ಹಾಗೂ 2005-06 ನೇ ಸಾಲಿನ ಹಾಗೂ ನಂತರದ ಸಾಲುಗಳು ಉಚಿತ ಹಾಗೂ ಮಾರಾಟದ ಪಠ್ಯಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯೇ ಮುದ್ರಿಸುವ ಕೆಳಕಂಡ ಕಾಂಪೊನೆಂಟ್(components) ಹೊಂದಿದ ಯೋಜನೆಗೆ (Project) ಮಂಜೂರಾತಿ ನೀಡಿದೆ.

| | | | |
|---|---|---|---|
| 1. | ಯಂತ್ರೋಪಕರಣ ಖರೀದಿಗಾಗಿ | - | 10.00 ಕೋಟಿ ರೂ. |
| 2. | ಕಾಗದ ಖರೀದಿಗೆ | - | 6.00 ಕೋಟಿ ರೂ. |
| 3. | ಪೀಸ್ ವರ್ಕ್ ವೇಜಸ್ | - | 0.50 ಕೋಟಿ ರೂ. |
| 4. | ಇ ತರೆ ವೆಚ್ಚಗಳು (outwork expenses) | - | 1.00 ಕೋಟಿ ರೂ. |
| 5. | ಸಾಗಾಣಿಕೆ ಮತ್ತು ನಿರ್ವಹಣೆ ವೆಚ್ಚ (Transportation & handling) | - | 1.00 ಕೋಟಿ ರೂ. |
| | **ಒಟ್ಟು** | - | **18.50 ಕೋಟಿ ರೂ.** |

ಈ ಆದೇಶವನ್ನು ಆರ್ಥಿಕ ಇ ಲಾಖೆಯು ದಿನಾಂಕ:28.5.2004 ರಂದು ಅ.ಟಿ. ಸಂ:ಆಇ .493 ವೆಚ್ಚ-8:2004 ರಲ್ಲಿ ನೀಡಿದ ಸಹಮತಿಯೊಡನೆ ಹೊರಡಿಸಲಾಗುತ್ತಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 840

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಸೇ-1,2)

## ಕಂದಾಯ ಸಚಿವಾಲಯ

**ವಿಷಯ:** ಮಿತವೇತನ (ಸ್ಟೈಫೆಂಡರಿ) ಗ್ರಾಮ ಸಹಾಯಕರ ಸೇವೆಯನ್ನು ದಿ.1.4.2004 ರಿಂದ 31.3.2005ರವರೆಗೆ ಮುಂದುವರೆಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕಂಇ 3 ಎಂ.ವಿ.ಎಸ್. 77, ದಿ.16.9.1978.
2. ಸರ್ಕಾರದ ಆದೇಶ ಸಂಖ್ಯೆ:ಕಂಇ 82 ಎಂ.ವಿ.ಎಸ್. (1)82, ದಿ.23.9.1982.
3. ಸರ್ಕಾರದ ಆದೇಶ ಸಂಖ್ಯೆ:ಕಂಇ 220 ಎಂ.ವಿ.ಎಸ್. 91, ದಿ.31.10.1991.
4. ಸರ್ಕಾರದ ಆದೇಶ ಸಂಖ್ಯೆ:ಕಂಇ 258 ಎಂ.ವಿ.ಎಸ್. 93, ದಿ.28.1.1994.

5. ಸರ್ಕಾರದ ಆದೇಶ ಸಂಖ್ಯೆ:ಕಂಇ 201 ಎಂ.ವಿ.ಎಸ್. 96, ದಿ.30.10.1996.
6. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್. 97, ದಿ.27.3.1997.
7. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್. 97, ದಿ.31.7.1997.
8. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್. 97(ಭಾಗ), ದಿ.31.12.1997.
9. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್. 97(ಭಾಗ), ದಿ.8.7.1998.
10. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್. 97(ಭಾಗ), ದಿ.6.1.1999.
11. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್. 97(ಭಾಗ), ದಿ.6.5.1999.
12. ಸರ್ಕಾರದ ಆದೇಶ ಸಂಖ್ಯೆ:ಕಂಇ 10 ಬಿ.ಎಸ್.ಸಿ. 2000, ದಿ.16.8.2000.
13. ಸರ್ಕಾರದ ಆದೇಶ ಸಂಖ್ಯೆ:ಕಂಇ 250 ಬಿ.ಎಸ್.ಸಿ. 2001, ದಿ.4.12.2001.
14. ಸರ್ಕಾರದ ಆದೇಶ ಸಂಖ್ಯೆ:ಕಂಇ 272 ಬಿ.ಎಸ್.ಸಿ. 2002, ದಿ.30.11.2002.
15. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಬಿ.ಎಸ್.ಸಿ. 2003, ದಿ.28.8.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ಮತ್ತು (2)ರಲ್ಲಿನ ಆದೇಶಗಳಲ್ಲಿ ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ 10450 ಗ್ರಾಮಸಹಾಯಕರನ್ನು ಮಿತವೇತನ (ಸ್ಟೈಪೆಂಡರಿ) ಹುದ್ದೆಗಳ ಆಧಾರದ ಮೇಲೆ 1978ನೇ ಸಾಲಿನಿಂದ ಹಾಗೂ ನಂತರದಿಂದ ಸದರಿ ಆದೇಶಗಳಲ್ಲಿನ ಷರತ್ತುಗಳಿಗೆ ಒಳಪಟ್ಟು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು, ತದನಂತರ ಕೊನೆಯದಾಗಿ ಸದರಿ ಗ್ರಾಮಸಹಾಯಕರುಗಳ ಸೇವೆಯು ಅಗತ್ಯತೆಯನ್ನು ಪರಿಗಣಿಸಿ, ಮಾಸಿಕ ನಿಗದಿತ ಸಂಭಾವನೆ ರೂ.1000/-ರ ಮೇರೆಗೆ ಮೇಲೆ ಓದಲಾದ ಕ್ರಮಸಂಖ್ಯೆ:(15)ರಲ್ಲಿನ ಆದೇಶದಲ್ಲಿ ದಿ.1.4.2003ರಿಂದ 31.3.2004ರವರೆಗೆ ಮುಂದುವರಿಸಲಾಗಿತ್ತು.

ಗ್ರಾಮಸಹಾಯಕರ ಸೇವೆಯು ಅಗತ್ಯತೆಯನ್ನು ಸರ್ಕಾರ ಪರಿಶೀಲಿಸಿ ಸದರಿ ಹುದ್ದೆಗಳನ್ನು ದಿ.1.4.04ರಿಂದ 31.3.05ರವರೆಗೆ ಮುಂದುವರೆಸಲು ಸರ್ಕಾರ ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಬಿಎಸ್.ಸಿ.2003 (ಭಾಗ), ಬೆಂಗಳೂರು, ದಿನಾಂಕ: 24ನೇ ಜುಲೈ 2004**

ಕಂದಾಯ ಇಲಾಖೆಯಲ್ಲಿ ನಿಗದಿತ ಹಂಗಾಮಿ ಹುದ್ದೆಗಳ ಮೇಲೆ ಕೆಲಸ ನಿರ್ವಹಿಸುತ್ತಿರುವ 10450 (ಹತ್ತು ಸಾವಿರದ ನಾಲ್ಕುನೂರ ಐವತ್ತು ಮಾತ್ರ) ಮಿತವೇತನ (ಸ್ಟೈಫೆಂಡರಿ) ಗ್ರಾಮ ಸಹಾಯಕರುಗಳ ಹುದ್ದೆಗಳನ್ನು ದಿ.1.4.2004 ರಿಂದ 31.3.2005 ರವರೆಗೆ ಮಾತ್ರ ಮಾಸಿಕ ಸಂಭಾವನೆ ರೂ.1000/- ದಂತೆ (ರೂಪಾಯಿ ಒಂದು ಸಾವಿರ ಮಾತ್ರ) ಮೇಲೆ ಓದಲಾದ ಕ್ರಮಸಂಖ್ಯೆ (1) ಮತ್ತು (3)ರ ಆದೇಶದಲ್ಲಿರುವ ಷರತ್ತುಗಳಿಗೊಳಪಟ್ಟು ಮುಂದುವರಿಸಿ ಆದೇಶಿಸಲಾಗಿದೆ.

ಮೇಲ್ಕಂಡ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2029-00-101-1-01-015 ಪೂರಕ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಎಫ್.ಡಿ.222 ವೆಚ್ಚ-7/04 ದಿ.18.6.2004ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 819

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2)

**ಆರ್ಥಿಕ ಸಚಿವಾಲಯ**

**ಸುತ್ತೋಲೆ ಸಂಖ್ಯೆ: ಆಇ 17 ಮಕಮು 2003(ಭಾ), ಬೆಂಗಳೂರು, ದಿನಾಂಕ: 13ನೇ ಜುಲೈ 2004**

**ವಿಷಯ:** ಸರ್ಕಾರಿ ನೌಕರರಿಗೆ/ಅಧಿಕಾರಿಗಳಿಗೆ ಹೆಚ್.ಡಿ.ಎಫ್.ಸಿ. ಮೂಲಕ ಮಂಜೂರು ಮಾಡಿರುವ ಗೃಹ ನಿರ್ಮಾಣ: ಖರೀದಿ:ರಿಪೇರಿಗೆ ಸಂಬಂಧಿಸಿದ ಸಾಲದ ಬಡ್ಡಿಯ ದರಗಳ ಇಳಿಕೆ ಬಗ್ಗೆ ಸ್ಪಷ್ಟೀಕರಣ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ:ಆಇ 17 ಮಕಮು 2003(ಭಾ), ದಿನಾಂಕ:11.6.2004.

ಸರ್ಕಾರಿ ಆದೇಶ ಸಂಖ್ಯೆ:ಆಇ 17 ಮಕಮು 2003(ಭಾ), ದಿನಾಂಕ:11.6.2004ರಲ್ಲಿ ಸರ್ಕಾರಿ ನೌಕರರಿಗೆ/ಅಧಿಕಾರಿಗಳಿಗೆ ಗೃಹನಿರ್ಮಾಣ/ಖರೀದಿ/ರಿಪೇರಿ ಮುಂಗಡ ಮಂಜೂರು ಮಾಡಲು ಉದ್ದೇಶಿಸಿ ಹೆಚ್.ಡಿ.ಎಫ್.ಸಿ.ಯಿಂದ ವಿವಿಧ ಕಂತುಗಳಲ್ಲಿ (LOC) ಸರ್ಕಾರವು ಪಡೆದಿರುವ ಸಾಲದ ಮೊತ್ತಕ್ಕೆ ಈಗ ನೀಡಲು ಬಾಕಿ ಉಳಿದಿರುವ ಮೊತ್ತದ ಮೇಲಿನ ಬಡ್ಡಿಯನ್ನು ದಿ:1.4.2004ರಿಂದ ಜಾರಿಗೆ ಬರುವಂತೆ ಶೇಕಡ 7.65ಗೆ ಇಳಿಸಲು ಮಂಜೂರಾತಿ ನೀಡಲಾಗಿತ್ತು. ಈ ಸೌಲಭ್ಯವನ್ನು ಪಡೆಯಲಿಚ್ಛಿಸುವ ಫಲಾನುಭವಿಗಳು ಸದರಿ ಆದೇಶದ ಜೊತೆ ಲಗತ್ತಿಸಿದ ನಮೂನೆಯಲ್ಲಿ ಅರ್ಜಿಯನ್ನು 50/-ರೂ.ಗಳ ಮೌಲ್ಯದ ನೊಂದಣಿ ಕಾಗದದ ಮೇಲೆ ಇಲಾಖಾ ಮುಖ್ಯಸ್ಥರ ಮುಖಾಂತರ ಹೆಚ್.ಸಿ.ಎಫ್. ಸಿ.ಗೆ ಕಳುಹಿಸಲು ತಿಳಿಸಲಾಗಿತ್ತು.

ಆದರೆ ಕೆಲವು ಸರ್ಕಾರಿ ನೌಕರರು/ಅಧಿಕಾರಿಗಳು ಗೃಹ ನಿರ್ಮಾಣ/ಖರೀದಿ/ರಿಪೇರಿ ಮುಂಗಡಗಳನ್ನು ಹೆಚ್.ಡಿ.ಎಫ್.ಸಿ.ಯಿಂದ ನೇರವಾಗಿ ಪಡೆದಿದ್ದು, ಅವರು ಈಗಿನ ಬಡ್ಡಿ ಇಳಿಕೆ ಸೌಲಭ್ಯವನ್ನು ಕೋರಿ ಅರ್ಜಿಯನ್ನು ಸಲ್ಲಿಸುತ್ತಿದ್ದಾರೆಂದು ತಿಳಿದುಬಂದಿದೆ. ಆದ್ದರಿಂದ ಈ ಬಗ್ಗೆ ಸೂಕ್ತ ಸ್ಪಷ್ಟೀಕರಣವನ್ನು ನೀಡುವುದು ಉಚಿತವೆಂದು ಸರ್ಕಾರವು ಭಾವಿಸಿದೆ.

ಸರ್ಕಾರಿ ಆದೇಶ ಸಂಖ್ಯೆ:ಆಇ 17 ಮಕಮು 2003(ಭಾ), ದಿನಾಂಕ:11.6.2004 ರಲ್ಲಿನ ಬಡ್ಡಿ ಇಳಿಕೆ ಸೌಲಭ್ಯವು ಹೆಚ್.ಡಿ.ಎಫ್.ಸಿ.ಯಿಂದ ಸರ್ಕಾರವು ವಿವಿಧ ಕಂತುಗಳಲ್ಲಿ (LOC) ಪಡೆದು ಆ ಸಾಲವನ್ನು ಸರ್ಕಾರಿ ನೌಕರರಿಗೆ/ಅಧಿಕಾರಿಗಳಿಗೆ ಗೃಹ ನಿರ್ಮಾಣ/ಖರೀದಿ/ರಿಪೇರಿಗೆ ಸರ್ಕಾರದಿಂದ ಮಂಜೂರು ಮಾಡಿದ ಮುಂಗಡಗಳಿಗೆ ಮಾತ್ರ ಅನ್ವಯಿಸುತ್ತದೆ ಮತ್ತು ಈ ಸೌಲಭ್ಯವು ಸರ್ಕಾರಿ ನೌಕರರಿಗೆ ಮೊದಲನೇ ಅಡಮಾನ ಅಥವಾ ಎರಡನೇ ಅಡಮಾನ ರೂಪದಲ್ಲಿ ನೇರವಾಗಿ ಹೆಚ್.ಡಿ.ಎಫ್.ಸಿ.ಯಿಂದ ಪಡೆದಂತಹ ಗೃಹ ನಿರ್ಮಾಣ/ಖರೀದಿ/ರಿಪೇರಿ ಸಾಲಗಳಿಗೆ ಅಥವಾ ಮುಂಗಡಗಳಿಗೆ ಅನ್ವಯಿಸುವುದಿಲ್ಲವೆಂದು ಈ ಮೂಲಕ ಸ್ಪಷ್ಟೀಕರಿಸಲಾಗಿದೆ. ಈ ಸ್ಪಷ್ಟೀಕರಣದನ್ವಯ ಅರ್ಜಿಗಳನ್ನು ಎಲ್ಲಾ ಇಲಾಖಾ ಮುಖ್ಯಸ್ಥರು ತಮ್ಮ ಇಲಾಖೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸೂಕ್ತ ಹಾಗೂ ಸೌಲಭ್ಯಕ್ಕೆ ಅರ್ಹರಿರುವ ಫಲಾನುಭವಿಗಳಿಂದ ಮಾತ್ರ ತುಂಬಿಸಿಕೊಂಡು ಹೆಚ್.ಡಿ.ಎಫ್.ಸಿ.ಗೆ ಕಳುಹಿಸುವಂತೆ ಈ ಮೂಲಕ ಸೂಚಿಸಲಾಗಿದೆ.

**ಎನ್. ಪ್ರಭಾಕರ್**

ಪಿ.ಆರ್. 821

ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## ಇಂಧನ ಸಚಿವಾಲಯ

### ತಿದ್ದೋಲೆ ಸಂಖ್ಯೆ: ಇಂಇ 104 ಎನ್‌ಸಿಇ 2004(1), ಬೆಂಗಳೂರು, ದಿನಾಂಕ: 26ನೇ ಜುಲೈ 2004

ಸರ್ಕಾರಿ ಆದೇಶ ಸಂಖ್ಯೆ: ಇಂಇ 103 ಎನ್‌ಸಿಇ 2004, ದಿನಾಂಕ: 13.5.2004 ಇಂಇ 104 ಎನ್‌ಸಿಇ 2004, ದಿನಾಂಕ: 13.5.2004 ಮತ್ತು ಇಂಇ 105 ಎನ್‌ಸಿಇ 2004, ದಿನಾಂಕ: 13.5.2004ರಲ್ಲಿ ಎಲ್ಲೆಲ್ಲಿ "ಮೆ:ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್" ಎಂದಿವೆಯೋ, ಅಲ್ಲೆಲ್ಲಾ "ಮೆ: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 822

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

### ತಿದ್ದೋಲೆ ಸಂಖ್ಯೆ: ಕೃತೋಇ 68 ಕೃಪಇ 2003, ಬೆಂಗಳೂರು, ದಿನಾಂಕ: 23ನೇ ಜುಲೈ 2004

ಸರ್ಕಾರದ ಅಧಿಸೂಚನೆ ಸಂಖ್ಯೆ:ಕೃತೋಇ 15 ಕೃಪಬ 99 ದಿನಾಂಕ: 16-5-2003 ರಂದು ಹೊರಡಿಸಲಾದ ದಿನಾಂಕ: 01-01-1999 ರಂತೆ ಇರುವ ಜಂಟಿ ಕೃಷಿ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿಯ ಪುಟ ಸಂಖ್ಯೆ 10 ರಲ್ಲಿನ ಕ್ರಮ ಸಂಖ್ಯೆ: 195 ರಲ್ಲಿರುವ ಶ್ರೀ ಕೆ.ಹನುಮಂತ ರೆಡ್ಡಿ, ಜಂಟಿ ಕೃಷಿ ನಿರ್ದೇಶಕರು ಇವರ ಜನ್ಮ ದಿನಾಂಕ:03-06-1952ಕ್ಕೆ ಬದಲಾಗಿ ಜನ್ಮ ದಿನಾಂಕವು 03-06-1955 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 824

ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 350 ಎಸ್‌ಎಎಸ್ 2004, ದಿನಾಂಕ: 30.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 30.6.2004ರ ಅಧಿಸೂಚನೆಯಲ್ಲಿ ಶ್ರೀ ಎಸ್.ಎಂ. ಜಾಮ್‌ದಾರ್, ಐ.ಎ.ಎಸ್. ಇವರನ್ನು ಕಂದಾಯ ಇಲಾಖೆಯಲ್ಲಿ ನಿಮ್ನೀಕರಿಸಲಾದ ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ. ಅದರಂತೆ, ಇವರು ದಿನಾಂಕ: 5.7.2004ರ ಅಪರಾಹ್ನ ಈ ಹುದ್ದೆಯಲ್ಲಿ ಕಾರ್ಯ ವರದಿ ಮಾಡಿಕೊಂಡಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಕಂದಾಯ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಎಸ್.ಎಂ. ಜಾಮ್‌ದಾರ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಕಾರ್ಯದರ್ಶಿ ಹುದ್ದೆ - ಎಂದು ನಿಮ್ನೀಕರಿಸುವ ಅಗತ್ಯತೆಯನ್ನು ಮನಗಂಡು, ಈ ಕೆಳಕಂಡಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 49 ಸಸಿವಿ 2004, ಬೆಂಗಳೂರು, ದಿನಾಂಕ: 15ನೇ ಜುಲೈ 2004

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯಲ್ಲಿ ಪ್ರಸ್ತುತ, ಅಸ್ತಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಎಸ್.ಎಂ. ಜಾಮ್‌ದಾರ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕ: 5.7.2004ರ ಅಪರಾಹ್ನದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಸರ್ಕಾರದ ಕಾರ್ಯದರ್ಶಿ ಹುದ್ದೆ - ಎಂದು ನಿಮ್ನೀಕರಿಸಲಾಗಿದೆ. ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001ರಲ್ಲಿ ನಿಗದಿಪಡಿಸಿರುವಂತೆ ಇವರ ಆಪ್ತ ಶಾಖೆಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ನಿಗದಿಪಡಿಸಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 825 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ತಿದ್ದುಪಡಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 55 ಸಸಿವಿ 2004, ಬೆಂಗಳೂರು, ದಿನಾಂಕ: 28ನೇ ಜುಲೈ 2004**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 2004, ದಿನಾಂಕ: 24.3.2004ರಲ್ಲಿ ಮುಂದುವರೆಸಲಾದ ಹುದ್ದೆಗಳಲ್ಲಿ ಕ್ರಮ ಸಂಖ್ಯೆ (8)ರಲ್ಲಿರುವ 'ಭಾಷಾಂತರಕಾರರು-1' ಹುದ್ದೆಯ ಕ್ರಮಾಂಕ ಮತ್ತು ಇತರ ಪದಗಳನ್ನು ಕೈಬಿಟ್ಟು, ಕ್ರಮ ಸಂಖ್ಯೆ 9,10,11 ರಲ್ಲಿರುವ ಹುದ್ದೆಗಳ ಕ್ರಮ ಸಂಖ್ಯೆಯನ್ನು ಅನುಕ್ರಮವಾಗಿ 8,9,10 ಎಂದು ಮರುವರ್ಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 826 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀಮತಿ ಬಿ. ವಂಶಿರೆಡ್ಡಿ, ಸಹಾಯಕ ಕೃಷಿ ಅಧಿಕಾರಿ, ಉಪ ಕೃಷಿ ನಿರ್ದೇಶಕರ ಕಚೇರಿ (ಕ್ಷೇತ್ರ ಪ್ರಯೋಗ) ಬೆಂಗಳೂರು ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಆದೇಶ.

**ಓದಲಾಗಿದೆ:**
1. ಜಂಟಿ ನಿರ್ದೇಶಕರು (ಆಡಳಿತ) ಇವರ ವರದಿ ಸಂಖ್ಯೆ: ಇಎಸ್‌ಟಿ 1 ಐಎನ್‌ಕ್ಯೂ(1)17:2002-03 ದಿನಾಂಕ:23-6-2003:4-7-2003 ಮತ್ತು ದಿನಾಂಕ:19:24-3-2004.
2. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎಸ್‌ಟಿ 1 ಐಎನ್‌ಕ್ಯೂ (1)17:2002-03 ದಿನಾಂಕ:2-1-2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಜಂಟಿ ಕೃಷಿ ನಿರ್ದೇಶಕರು (ಆಡಳಿತ) ರವರು ಶ್ರೀಮತಿ ಬಿ. ವಂಶಿರೆಡ್ಡಿ, ಸಹಾಯಕ ಕೃಷಿ ಅಧಿಕಾರಿ, ಉಪಕೃಷಿ ನಿರ್ದೇಶಕರ ಕಚೇರಿ (ಕ್ಷೇತ್ರ ಪ್ರಯೋಗ) ಬೆಂಗಳೂರು ಇವರು ದಿನಾಂಕ:21-01-2002 ರಿಂದ 20-04-2002 ರವರೆಗೆ ವೈದ್ಯಕೀಯ ಕಾರಣದ ಮೇಲೆ ರಜೆ ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿ ಹೋದವರು ಕೋರಿದ ರಜೆ ಅವಧಿ ಮುಗಿದಿದ್ದರೂ ದಿನಾಂಕ:21-04-2002 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಹಾಜರಾಗದೆ ಮೇಲೆ ಸಲ್ಲಿಸಿದ ವೈದ್ಯಕೀಯ ರಜೆಗೆ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸದೆ ಹಾಗೂ ಸಕ್ಷಮ ಪ್ರಾಧಿಕಾರದಿಂದ ರಜೆ ಮಂಜೂರು ಮಾಡಿಸಿಕೊಳ್ಳದೆ ಸೇವೆಗೆ ಅನಧಿಕೃತ ಗೈರು ಹಾಜರಿ ಆದಕಾರಣ, ಅವರ ವಾಸದ ವಿಳಾಸಕ್ಕೆ ಅಂಚೆ ಮೂಲಕ ಕಳುಹಿಸಿ ಕೊಡಲಾದ ತಿಳುವಳಿಕೆ:ಮರುಕರೆ ಪತ್ರಗಳುಳ್ಳ ಲಕೋಟೆಗಳು ಅವರಿಂದ ಸ್ವೀಕೃತವಾಗದೆ ವಿಳಾಸದಾರರು 4 ತಿಂಗಳು: 6 ತಿಂಗಳು ಭಾರತ ಬಿಟ್ಟು ಹೋಗಿದ್ದಾರೆಂಬ ಹಿಂಬರಹದೊಂದಿಗೆ ವಾಪಸ್ಸು ಬಂದಿರುತ್ತವೆಂದು, ಉಪ ಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ರವರು ದಿನಾಂಕ:21-08-2002 ರ ಪತ್ರದಲ್ಲಿ ವರದಿ ಮಾಡಿದ್ದಾರೆಂದು ತಿಳಿಸಿದ್ದಾರೆ.

ಶ್ರೀಮತಿ ಬಿ. ವಂಶಿರೆಡ್ಡಿರವರು ಈ ಹಿಂದೆ ಕೃಷಿ ಅಧಿಕಾರಿ ಕಚೇರಿ (ಮಣ್ಣು ಆರೋಗ್ಯ ಕೇಂದ್ರ) ಬೆಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:19-05-2001 ರಿಂದ 19-10-2001 ರವರೆಗೆ ಅನಧಿಕೃತ ಗೈರುಹಾಜರಿ ಆಗಿರುವುದು ಕೃಷಿ ಅಧಿಕಾರಿ (ಮಣ್ಣು ಆರೋಗ್ಯ ಕೇಂದ್ರ) ಬೆಂಗಳೂರು ಇವರ ದಿನಾಂಕ:24-10-2002ರ ಪತ್ರದ ರೀತ್ಯಾ ವರದಿಯಾಗಿರುತ್ತದೆಂದು ತಿಳಿಸುತ್ತಾ, ಈ ಅಧಿಕಾರಿ ಈ ರೀತಿ ಪೂರ್ವಾನುಮತಿ ಪಡೆಯದೆ, ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸದೆ ಸೇವೆಗೆ ಅನಧಿಕೃತ ಗೈರುಹಾಜರಿಯಾದ ಆಪಾದನೆಯ ಮೇಲೆ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಡನೆ ಶ್ರೀಮತಿ ಬಿ. ವಂಶಿರೆಡ್ಡಿ ರವರಿಗೆ ಜಾರಿಮಾಡಲು ಮೇಲೆ (2) ರಲ್ಲಿ ಓದಲಾದ ದಿನಾಂಕ:02-01-2003ರಂದು ಉಪಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ಇವರಿಗೆ ಕಳುಹಿಸಿ ಕೊಡಲಾಗಿದ್ದು, ಸದರಿ ಆಪಾದಿತರ ವಾಸದ ವಿಳಾಸಕ್ಕೆ ಅಂಚೆ ಮೂಲಕ ಕಳುಹಿಸಿಕೊಡಲಾದ ದೋಷಾರೋಪಣಾ ಪಟ್ಟಿಯ ಲಕೋಟೆಯು ಅವರಿಂದ ಸ್ವೀಕೃತವಾಗದೆ ವಿಳಾಸದಾರರು ಭಾರತ ಬಿಟ್ಟಿದ್ದಾರೆ ಎಂಬ ಹಿಂಬರಹದೊಂದಿಗೆ ವಾಪಸ್ಸು ಬಂದಿರುತ್ತದೆಂದು ಉಪಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ರವರು ದಿನಾಂಕ:25-01-2003 ರಂದು ವರದಿ ಮಾಡಿದ್ದಾರೆಂದು, ಈ ದೋಷಾರೋಪಣಾ ಪಟ್ಟಿಯನ್ನು ಪಡೆಯುವಂತೆ ಜನವಾಹಿನಿ ದಿನಪತ್ರಿಕೆಯಲ್ಲಿ ದಿನಾಂಕ:20-02-2003 ಹಾಗೂ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ದಿನಾಂಕ:21-2-2003 ರಂದು ಪ್ರಕಟಿಸಲಾಗಿದ್ದು, ಸದರಿಯವರು ಕರ್ತವ್ಯಕ್ಕೆ ಹಾಜರಾಗುವುದಾಗಲೀ ಅಥವಾ ದೋಷಾರೋಪಣಾ ಪಟ್ಟಿಯನ್ನು ಪಡೆಯುವುದಾಗಲೀ ಮಾಡಿಲ್ಲವೆಂದು ಉಪಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ರವರು ದಿನಾಂಕ:24-03-2003 ರಂದು ವರದಿ ಮಾಡಿರುತ್ತಾರೆ. ಈ ಅಧಿಕಾರಿಯ ವರ್ತನೆಯನ್ನು ಗಮನಿಸಿದಾಗ ಸರ್ಕಾರೀ ಸೇವೆಯಲ್ಲಿ ಮುಂದುವರೆಯುವ ಆಸಕ್ತಿ ಇಲ್ಲವೆಂದು ತೋರುವುದರಿಂದ, ಅಲ್ಲದೆ ವಿಚಾರಣೆ ನಡೆಸಲು ಸಾಧ್ಯವಾಗದೆ ಇರುವುದರಿಂದ ಸಿ.ಸಿ.ಎ. ನಿಯಮ 14(ii) ರ ಪ್ರಕಾರ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಬಹುದಾಗಿದೆಯೆಂದು ಕೃಷಿ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಸರ್ಕಾರವು ಕೃಷಿ ಆಯುಕ್ತರು ಸಲ್ಲಿಸಲಾದ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಶ್ರೀಮತಿ ಬಿ. ವಂಶಿರೆಡ್ಡಿಯವರು ದಿನಾಂಕ:21-1-2002ರಿಂದ 20-4-2002 ರವರೆಗೆ ವೈದ್ಯಕೀಯ ಕಾರಣದ ಮೇಲೆ ರಜೆ ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿ ಹೋಗಿದ್ದು, ರಜೆ ಮುಗಿಸಿದ ನಂತರ ದಿನಾಂಕ:21-04-2002 ರಿಂದ ಇಲ್ಲಿಯವರೆಗೆ ಯಾವುದೇ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ,

ವೈದ್ಯಕೀಯ ಪ್ರಮಾಣಪತ್ರಗಳನ್ನು ಹಾಜರುಪಡಿಸದೆ, ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ಅಲ್ಲದೆ ಇವರಿಗೆ ಜಾರಿಮಾಡಲಾದ ಮರುಕರೆ ನೋಟೀಸು ಹಾಗೂ ದೋಷಾರೋಪಣಾ ಪಟ್ಟಿಗಳನ್ನು ಸ್ವೀಕರಿಸಿದ ಕಾರಣ ಅವರು ಭಾರತ ಬಿಟ್ಟು ಹೋಗಿದ್ದಾರೆಂಬ ಹಿಂಬರಹದೊಂದಿಗೆ ವಾಪಸ್ಸು ಬಂದಿರುವುದರಿಂದ ಇವರ ವಿರುದ್ಧ ವಿಚಾರಣೆ ನಡೆಸಲು ಆಪಾದಿತರು ವಿಚಾರಣೆಯಲ್ಲಿ ಪಾಲುಗೊಳ್ಳುತ್ತಿಲ್ಲವಾದ್ದರಿಂದ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮ 14(ii) ರ ಪ್ರಕಾರ ದಂಡನೆ ವಿಧಿಸಬಹುದಾಗಿದ್ದು, ಇವರನ್ನು ಸರ್ಕಾರಿ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಸರ್ಕಾರ ತೀರ್ಮಾನಿಸಿದೆ. ಆದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ:ಕೃತೋಇ 55 ಕೃಪವಿ 2003, ಬೆಂಗಳೂರು, ದಿನಾಂಕ: 13ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14(ii) ರನ್ವಯ ಹಾಗೂ 8 (vii) ರನ್ವಯ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಶ್ರೀಮತಿ ಬಿ. ವಂಶಿರೆಡ್ಡಿ, ಸಹಾಯಕ ಕೃಷಿ ಅಧಿಕಾರಿ, ಉಪ ಕೃಷಿ ನಿರ್ದೇಶಕರ ಕಚೇರಿ (ಕ್ಷೇತ್ರ ಪ್ರಯೋಗ) ಬೆಂಗಳೂರು ರವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಂ.ಎಸ್. ದೇಸಾಯಿ

ಪಿ.ಆರ್. 827

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2004–05 ನೇ ಸಾಲಿನ ಉಚಿತ ಪಠ್ಯಪುಸ್ತಕ ಹಾಗೂ 2005–06 ನೇ ಸಾಲಿನ ಉಚಿತ ಹಾಗೂ ಮಾರಾಟದ ಪಠ್ಯಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸುವ ಸಂಬಂಧ ಅಗತ್ಯ ಮಂಜೂರಾತಿಗಳನ್ನು ನೀಡಲು ಸಚಿವ ಸಂಪುಟದ ಅಧಿಕಾರವುಳ್ಳ ಅಧಿಕಾರಸ್ತ ಸಮಿತಿಯ ರಚನೆ.

**ಪ್ರಸ್ತಾವನೆ:**

2004–05 ನೇ ಸಾಲಿನಲ್ಲಿ ಶಾಲಾ ಮಕ್ಕಳಿಗೆ ಉಚಿತ ಪಠ್ಯಪುಸ್ತಕ ವಿತರಣೆಗೆ ಪುಸ್ತಕಗಳನ್ನು ಮುದ್ರಿಸಲು, ಹಾಗೂ 2005–06 ನೇ ಸಾಲಿನಿಂದ ಉಚಿತ ಹಾಗೂ ಮಾರಾಟದ ಪಠ್ಯಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸುವುದು ರಾಜ್ಯ ಸರ್ಕಾರಕ್ಕೆ ಹಣಕಾಸಿನ ಉಳಿತಾಯದ ದೃಷ್ಟಿಯಿಂದ ಸೂಕ್ತವೆಂದು ಸರ್ಕಾರ ನಿರ್ಧರಿಸಿದೆ. ಮುದ್ರಣ ಕಾರ್ಯವು ನಿಗದಿತ ಅವಧಿಯೊಳಗೆ ಮುಗಿಯಲು, ಸರ್ಕಾರದಿಂದ ಅಗತ್ಯವಾದ ಮಂಜೂರಾತಿ, ಅನುಮೋದನೆ ನೀಡಲು ಒಂದು ಅಧಿಕಾರಸ್ತ ಮತ್ತು ಸಮಿತಿ ರಚಿಸಿ, ಸದರಿ ಸಮಿತಿಗೆ ರಾಜ್ಯ ಸಚಿವ ಸಂಪುಟದ ಅಧಿಕಾರ ಪ್ರತ್ಯಾಯೋಜಿಸಲು ನಿರ್ಧರಿಸಿ, ಸರ್ಕಾರ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 13 ಡಿಜಿಟಿ 2004 (ಭಾಗ–4) ಬೆಂಗಳೂರು, ದಿನಾಂಕ: 29ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಸನ್ನಿವೇಶಗಳ ಹಿನ್ನಲೆಯಲ್ಲಿ ಪಠ್ಯಪುಸ್ತಕಗಳ ಮುದ್ರಣಕ್ಕೆ ಸಂಬಂಧಿಸಿದ ತೀರ್ಮಾನಗಳನ್ನು ಸರ್ಕಾರದ ಮಟ್ಟದಲ್ಲಿ ತೆಗೆದುಕೊಳ್ಳಲು ಹಾಗೂ ಅವಶ್ಯ ಮಂಜೂರಾತಿಗಳನ್ನು ನೀಡಲು, ಈ ಕೆಳಕಂಡ ಅಧಿಕಾರಸ್ಥ ಸಮಿತಿಯನ್ನು ರಚಿಸಿದೆ. ಅದರ ಅಧಿಕಾರ ಮತ್ತು ಪ್ರಕಾರ್ಯಗಳು ಅಧಿಕಾರದ ಅವಧಿ ಕಾರ್ಯವಿಧಾನಗಳನ್ನು ಕೆಳಕಂಡಂತೆ ನಿಗದಿಪಡಿಸಿದೆ.

1. **ರಚನೆ:**

| | | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು, ಆರ್ಥಿಕ ಇಲಾಖೆ | – | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ) ಶಿಕ್ಷಣ ಇಲಾಖೆ | – | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿಯವರು (ವೆಚ್ಚ) ಆರ್ಥಿಕ ಇಲಾಖೆ | – | ಸದಸ್ಯರು |
| 4. | ಸರ್ಕಾರದ ಕಾರ್ಯದರ್ಶಿಯವರು, ಕಾನೂನು ಇಲಾಖೆ | – | ಸದಸ್ಯರು |
| 5. | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ | – | ಸದಸ್ಯರು |
| 6. | ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆ ಇಲಾಖೆ, ಬೆಂಗಳೂರು | – | ಸದಸ್ಯ–ಕಾರ್ಯದರ್ಶಿ |

**ಅಧಿಕಾರಗಳು ಮತ್ತು ಪ್ರಕಾರ್ಯಗಳು:**

1. ಸರ್ಕಾರಿ ಮುದ್ರಣಾಲಯದಲ್ಲಿ ಶಾಲಾ ಪಠ್ಯ ಪುಸ್ತಕಗಳನ್ನು ಮುದ್ರಿಸುವ ಯೋಜನೆಗೆ ಸಂಬಂಧಿಸಿದಂತೆ ಮಂಜೂರಾತಿ ನೀಡಲು ಕರ್ನಾಟಕ ಸರ್ಕಾರ (ವ್ಯವಹರಣೆ–ನಿರ್ವಹಣೆ) ನಿಯಮಾವಳಿಗಳು 1977 ರ ನಿಯಮ 2(1)(ಸಿ) ಯಲ್ಲಿ ಪರಿಭಾಷಿಸಿರುವ ಸಚಿವ ಸಂಪುಟದ ಅಧಿಕಾರಗಳನ್ನು ಹೊಂದಿರುತ್ತದೆ.
2. ಸಲಹೆ ಪಡೆಯಲು ಅಧಿಕಾರಿಗಳನ್ನೂ ಸಹ ಆಯ್ದುಕೊಳ್ಳುವ (ಕೋ–ಆಪ್ಟ್) ಅಧಿಕಾರವನ್ನು ಹೊಂದಿರುತ್ತದೆ.
3. ತಾತ್ಕಾಲಿಕ ಉಪಸಮಿತಿಗಳನ್ನು ರಚಿಸಿಕೊಳ್ಳಲು ಅಧಿಕಾರ ಹೊಂದಿರುತ್ತದೆ.

3. **ಅಧಿಕಾರದ ಅವಧಿ:**

ಈ ಆದೇಶದ ದಿನಾಂಕದಿಂದ ಮುಂದಿನ ಆದೇಶದವರೆಗೆ ಅಸ್ತಿತ್ವದಲ್ಲಿರುತ್ತದೆ.

4. **ಕಾರ್ಯವಿಧಾನ:**

1. ಸದಸ್ಯ ಕಾರ್ಯದರ್ಶಿಯವರು, ಅಧ್ಯಕ್ಷರ ಅನುಮೋದನೆ ಪಡೆದು ಸಮಿತಿ ಸಭೆಯ ಸೂಚನಾ ಪತ್ರವನ್ನು ಹೊರಡಿಸತಕ್ಕದ್ದು. ಸಭೆಯ ಪ್ರಾರಂಭ ಸಮಯಕ್ಕೆ 24 ಗಂಟೆಗಳ ಮುಂಚೆ ಸೂಚನಾ ಪತ್ರವು ಪ್ರತಿ ಸದಸ್ಯರಿಗೆ ತಲುಪುವಂತೆ ಖಾತರಿ ಮಾಡಿಕೊಳ್ಳತಕ್ಕದ್ದು.

2. ಸದಸ್ಯರು ಸಭೆಯಲ್ಲಿ ತಮ್ಮ ಅಭಿಪ್ರಾಯವನ್ನು ಮಂಡಿಸಲು ಸಹಕಾರಿಯಾಗುವಂತೆ ಎಲ್ಲಾ ಸಭಾ ಸೂಚನಾ ಪತ್ರದೊಡನೆ ಸ್ವಯಂವೇದ್ಯ ಅಜೆಂಡಾ ಟಿಪ್ಪಣಿಯನ್ನು ಕಳುಹಿಸಿಕೊಡತಕ್ಕದ್ದು.

3. ಅಧ್ಯಕ್ಷರ ವಿವೇಚನೆ ಮೇರೆಗೆ ಈ ಅಧಿಕಾರಸ್ಥ ಸಮಿತಿಯು ಅಗತ್ಯವೆನಿಸಿದಾಗ ಯಾವಾಗ ಎಷ್ಟು ಸಲ ಬೇಕಾದರೂ ಸಭೆ ಸೇರಬಹುದು.

4. ಸದಸ್ಯ ಕಾರ್ಯದರ್ಶಿಯವರು ಅಧ್ಯಕ್ಷರ ಅನುಮೋದನೆ ಪಡೆದು, ಪ್ರತಿ ಸಭೆಯ ನಡವಳಿಗಳನ್ನು ಸಭೆ ಮುಗಿದ 24 ಗಂಟೆಯೊಳಗಾಗಿ ಎಲ್ಲಾ ಸಮಿತಿ ಸದಸ್ಯರಿಗೆ (ಅವರು ಹಾಜರಿರಲಿ ಅಥವಾ ಇಲ್ಲದಿರಲಿ) ಕಳುಹಿಸಿಕೊಡತಕ್ಕದ್ದು.

5. ಸಚಿವ ಸಂಪುಟದ ಅನುಮೋದನೆ ಅಗತ್ಯವಿರುವಂತಹ ಪ್ರಕರಣಗಳಲ್ಲಿ ಸಮಿತಿ ಸಭೆಯ ತೀರ್ಮಾನಗಳಂತೆ ಸರ್ಕಾರಿ ಆದೇಶ ಹೊರಡಿಸಬೇಕಾಗಿದ್ದಲ್ಲಿ, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆ ಇಲಾಖೆಯ ನಿರ್ದೇಶಕರು ಸಭೆಯ ತೀರ್ಮಾನಗಳನ್ನೊಳಗೊಂಡ ಅಧಿಕೃತ ಪತ್ರವನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇವೆಗಳು–1,2) ಇವರಿಗೆ ತಾವೇ ಖುದ್ದಾಗಿ ಮುಟ್ಟಿಸತಕ್ಕದ್ದು. ಸರ್ಕಾರ ಕೈಗೊಳ್ಳಬೇಕಾದ ಕ್ರಮ, ಹಾಗೂ ತೆಗೆದುಕೊಳ್ಳಬೇಕಾದ ನಿರ್ಧಾರದ ಅಂಶವನ್ನು ಸದರಿ ಪತ್ರವು ಒಳಗೊಂಡಿರತಕ್ಕದ್ದು. ಅಂತಹ ಪ್ರತಿಯೊಂದು ಪತ್ರವೂ, ಸಭಾ ಸೂಚನಾ ಪತ್ರ, ಸಂಬಂಧಿಸಿದ ಅಜೆಂಡಾ ಟಿಪ್ಪಣಿ ಹಾಗೂ ಸಭೆಯ ನಡವಳಿಗಳನ್ನೊಳಗೊಂಡಿರತಕ್ಕದ್ದು. ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, ಅವರು ಅಂತಹ ಪತ್ರ ತಲುಪಿದ 24 ಗಂಟೆಯೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ) ಶಿಕ್ಷಣ ಇಲಾಖೆ, ಅವರ ಅನುಮೋದನೆ ಪಡೆದು, ಸೂಕ್ತ ಆದೇಶ:ಇತರ ಅಗತ್ಯ ಸಂವಾರ್ತೆ ಹೊರಡಿಸುವಂತೆ ನೋಡಿಕೊಳ್ಳತಕ್ಕದ್ದು. ಸಮಿತಿಯ ತೀರ್ಮಾನದಂತೆ ಆದೇಶ ಹೊರಡಿಸುವಲ್ಲಿ, ಅಂತಹ ಆದೇಶ ಹೊರಡಿಸಲು ಕರ್ನಾಟಕ ಸರ್ಕಾರಿ (ವ್ಯವಹರಣೆ) ನಿಯಮಾವಳಿಗಳು 1977 ರಂತೆ ಇತರೆ ಇಲಾಖೆಗಳ ಸಹಮತಿ ಹಾಗೂ ಇತರ ಪ್ರಾಧಿಕಾರಗಳ ಅನುಮೋದನೆ ಅಗತ್ಯವಿದ್ದರೂ ಸಹ, ಶಿಕ್ಷಣ ಇಲಾಖೆ ಆದೇಶ ಹೊರಡಿಸುವಾಗ ಅಂತಹ ಸಹಮತಿ, ಅನುಮೋದನೆ ಪಡೆಯುವ ಅಗತ್ಯ ಇರುವುದಿಲ್ಲ. ಕರ್ನಾಟಕ ಸರ್ಕಾರಿ (ವ್ಯವಹರಣೆ) ರ ನಿಯಮ 17(4) ರ ಅವಕಾಶಗಳಿಗೆ ಸಂಬಂಧಿಸಿದಂತೆ ಮಂಜೂರಾತಿ ನೀಡುವ ಆದೇಶದಲ್ಲಿ ದಿನಾಂಕ:29.7.2004 ರ ಆದೇಶ ಸಂಖ್ಯೆ:ಇಡಿ 13 ಡಿಜಿಒ 2004 (ಭಾಗ–4) ರಲ್ಲಿ ರಚಿತವಾದ ಅಧಿಕಾರಸ್ಥ ಸಮಿತಿಯು ದಿನಾಂಕ: ರ ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ಈ ಆದೇಶವನ್ನು ಹೊರಡಿಸಲಾಗುತ್ತಿದೆ ಎಂದು ಸ್ಪಷ್ಟವಾಗಿ ಆದೇಶದಲ್ಲಿ ನಮೂದಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 828

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಸೇ–1,2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಅಲ್ಪಸಂಖ್ಯಾತರ ಕಲ್ಯಾಣ ವಿಷಯಗಳನ್ನು ನಿರ್ವಹಿಸಲು ಒಂದು ಪ್ರತ್ಯೇಕ ಇಲಾಖೆಯನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ:**

ಅಲ್ಪಸಂಖ್ಯಾತರ ಅಭಿವೃದ್ಧಿ ವಕ್ಫ್ ಹಜ್, ಉರ್ದು ಭಾಷೆ ಇತ್ಯಾದಿ ವಿಷಯಗಳನ್ನು ಈಗ ಪ್ರತ್ಯೇಕವಾಗಿ ನಿರ್ವಹಿಸಲಾಗುತ್ತಿದೆ. ಈ ಎಲ್ಲಾ ಚಟುವಟಿಕೆಗಳನ್ನು ಒಟ್ಟಿಗೆ ನಿರ್ವಹಿಸಲು ಒಂದು ಪ್ರತ್ಯೇಕವಾಗಿ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗುವುದು ಎಂದು ದಿನಾಂಕ: 19-7-2004 ರಂದು ಮಂಡಿಸಲಾದ ಆಯವ್ಯಯ ಭಾಷಣದಲ್ಲಿ ಕಂಡಿಕೆ 71ರಲ್ಲಿ ತಿಳಿಸಲಾಗಿದೆ. ಅದರನ್ವಯ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 61 ಸಸಿವಿ 2004, ಬೆಂಗಳೂರು, ದಿನಾಂಕ: 30ನೇ ಜುಲೈ 2004**

ಅಲ್ಪ ಸಂಖ್ಯಾತರ ಕಲ್ಯಾಣ ವಿಷಯಗಳನ್ನು ನಿರ್ವಹಿಸಲು ಐ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದದಲ್ಲಿ ಒಂದು "ಕಾರ್ಯದರ್ಶಿ ಅಲ್ಪಸಂಖ್ಯಾತರ ಕಲ್ಯಾಣ" ಎಂಬ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಈ ಕಾರ್ಯದರ್ಶಿ ಹುದ್ದೆಗೆ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000 ದಿನಾಂಕ: 8-6-2001 ರಲ್ಲಿ ನಿಗದಿಪಡಿಸಿರುವ ಇತರ ಪೂರಕ ಸಿಬ್ಬಂದಿಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೆಲ್ವಕುಮಾರ್**

ಪಿ.ಆರ್. 829

ಸರ್ಕಾರದ ಉಪ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸರ್ಕಾರಿ ಯುನಾನಿ ಆಸ್ಪತ್ರೆ, ಬೆಂಗಳೂರು ಹಾಗೂ ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ, ಬೆಂಗಳೂರು ಇಲ್ಲಿಗೆ ಭೂಮಿಯನ್ನು ಹಂಚಿಕೆ ಮಾಡಿಕೊಡುವ ಬಗ್ಗೆ.

**ಓದಲಾಗಿದೆ:**

1. ಜನರಲ್ ಸೆಕ್ರೆಟರಿ, ಕರ್ನಾಟಕ ರಾಜ್ಯಯುನಾನಿ ವೈದ್ಯಕೀಯ ಕಾಲೇಜು ಟೀಚರ್ಸ್ ಅಸೋಸಿಯೇಷನ್, ಬೆಂಗಳೂರು ಇವರ ಮನವಿ ದಿನಾಂಕ:23.2.2004.
2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಹೆಚ್‌ಬಿಡಿ (2) : 158 : 2003-2004, ದಿನಾಂಕ: 20.3.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಜನರಲ್ ಸೆಕ್ರೆಟರಿ, ಕರ್ನಾಟಕ ರಾಜ್ಯ ಯುನಾನಿ, ವೈದ್ಯಕೀಯ ಕಾಲೇಜು ಟೀಚರ್ಸ್ ಅಸೋಸಿಯೇಷನ್, ಬೆಂಗಳೂರು ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಸರ್ಕಾರಿ ಯುನಾನಿ ಆಸ್ಪತ್ರೆಗೆ ಎರಡು ಎಕರೆ ಜಮೀನನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ತಮ್ಮ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸಂಬಂಧಪಟ್ಟಂತೆ 2 ಎಕರೆ ಜಮೀನು ಮಾಗಡಿ ರಸ್ತೆಯ ಸಿದ್ದಯ್ಯ ಪುರಾಣಿಕ ರಸ್ತೆಯಲ್ಲಿ ಲಭ್ಯವಿದ್ದು, ಈ ಜಮೀನಿನಲ್ಲಿ 1 (ಒಂದು) ಎಕರೆ ಜಮೀನನ್ನು ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ, ಬೆಂಗಳೂರು ಇಲ್ಲಿಗೆ ಹಾಗೂ 1 (ಒಂದು) ಎಕರೆ ಜಮೀನನ್ನು ಸರ್ಕಾರಿ ಯುನಾನಿ ಆಸ್ಪತ್ರೆ, ಬೆಂಗಳೂರು, ಇಲ್ಲಿಗೆ ಕಟ್ಟಡ ನಿರ್ಮಾಣಕ್ಕಾಗಿ ಹಂಚಿಕೆ ಮಾಡಲು ನಕ್ಷೆಯೊಂದಿಗೆ ಪ್ರಸ್ತಾಪಿಸಿ, ಈ ಎರಡು ಎಕರೆ ಜಮೀನನ್ನು ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರಿಗೆ ಹಂಚಿಕೆ ಮಾಡಲು ಒಪ್ಪಿದ್ದು, ಈ ಬಗ್ಗೆ ಆದೇಶ ಹೊರಡಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 246 ಪಿಟಿಡಿ 2004, ಬೆಂಗಳೂರು, ದಿನಾಂಕ: 28ನೇ ಜುಲೈ 2004**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರ ವ್ಯಾಪ್ತಿಯಲ್ಲಿ ಬರುವ ಮಾಗಡಿ ರಸ್ತೆಯ ಸಿದ್ದಯ್ಯ ಪುರಾಣಿಕ ರಸ್ತೆಯಲ್ಲಿರುವ ವಸತಿ ಗೃಹ ಮುಂಭಾಗದ 2 ಎಕರೆ ಜಮೀನಿನಲ್ಲಿ 1 (ಒಂದು) ಎಕರೆ ಜಮೀನನ್ನು ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ, ಬೆಂಗಳೂರು ಹಾಗೂ 1 (ಒಂದು) ಎಕರೆ ಜಮೀನನ್ನು ಸರ್ಕಾರಿ ಯುನಾನಿ ಆಸ್ಪತ್ರೆ, ಬೆಂಗಳೂರು ಇಲ್ಲಿಗೆ ಕಟ್ಟಡ ನಿರ್ಮಾಣಕ್ಕಾಗಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರಿಗೆ ಹಂಚಿಕೆ ಮಾಡಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಅನಿಲ್ ಕುಮಾರ್**

ಪಿ.ಆರ್. 831

ಸರ್ಕಾರದ ಉಪ ಕಾರ್ಯದರ್ಶಿ-2,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## REVENUE SECRETARIAT

**Sub:** Computerization Project of Stamps & Registration Department – release of amount of Rs.3-00 crores sanctioned by 11th Finance Commission.

**Read:**
1. D.O.letter No. FD 36 FCC 2001, dated:29.3.2001.
2. Govt. Order No. RD 64 MUNOSA 2001 (Part), dated: 8.8.2001.
3. Govt. Order No. RD 64 MUNOSA 2002, dated:25.7.2002.
4. 6th Meeting of the SLEC held on 9.9.2003.
5. 7th Meeting of the SLEC held on 5.12.2003.

**Preamble:**

In the letter dated 29.3.2001 read at (1) above, the Finance Department has sent a proposal to Government of India to release 3.00 crores under the 11th Finance Commission for Computerization of Stamps & Registration Department by upgrading all standards of administration. Hence the year wise allocation made by the 11th Finance Commission for this project is as follows:

Rs. in Crores

| Scheme/Sector | 2000-01 | 2001-02 | 2002-03 | 2003-04 | 2004-05 | Total |
|---|---|---|---|---|---|---|
| Fiscal Administration (Stamps & Registration Dept.) | 0.75 | 0.75 | 0.75 | 0.75 | 0.00 | 3.00 |

The State Government has to utilize the amount released as above by the 11th Finance Commission within the stipulated time.

In the Government Order dated: 8.8.2001 read at (2) above the Government has given its administrative approval for computerization of 12 Sub-registrar offices of the Stamps & Registration Department by using the amount of Rs. 3.00 crores released by the 11th Finance Commission.

In the Government Order dated: 25.7.2002 read at (3) above, the Government has ordered the Department to go for e-governance and total implementation of computerization on the principle of Public-Private Participation. For implementing complete computerization C-DAC has been appointed as Technical Solution Provider for the whole computerization process.

In the 6th SLEC meeting held on 9.9.2003 read at (4) above, the decision was taken to submit a revised proposal for total computerization in Stamps & Registration Department.

In the 7th SLEC Meeting held on 5.12.2003 read at (5) above revised proposal was approved. Hence the following order.

**Government Order No. RD 281 MUNOMU 2004, Bangalore Dated:14th July 2004**

Administrative approval is accorded for utilization of Rs.300 lakhs provided under 11th Finance Commission in modification Govt. Order dated:8.8.2001 as per the decision of the 7th SLEC meeting dated 8.12.2003 as follows :

| | | |
|---|---|---|
| 1. | For data entry encumbrance and checking | Rs. 100.00 lakhs |
| 2. | Development of Encumbrance Software module | Rs. 50.00 lakhs |
| 3. | Network build up between Sub-registrar offices in the State | Rs. 40.00 lakhs |
| 4. | Payment to C-DAC for Kaveri software | Rs.110.00 lakhs |
| | **Total** | **Rs.300.00 lakhs** |

By Order and in the name of the Governor of Karnataka,

**D.N.SREEMUKHI**

P.R. 832

Under Secretary to Government,
Revenue Department (Stamps & Registration)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ಮಾಗಡಿ, ಇವರ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣದ ಬಗ್ಗೆ ಕಾನೂನು ಕ್ರಮ ಜರುಗಿಸಲು ಮಂಜೂರಾತಿ ಕುರಿತು.

**ಓದಲಾಗಿದೆ:** ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.36/2002, ದಿನಾಂಕ: 28-10-2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:28.10.2003ರ ಪತ್ರದಲ್ಲಿ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಎಂ. ಪುಟ್ಟಸ್ವಾಮಿ, ಹಿರಿಯ ಉಪ ನೋಂದಣಾಧಿಕಾರಿ (ಹಿಂದಿನ), ಬಸವೇಶ್ವರ ನಗರ ಬೆಂಗಳೂರು ಉತ್ತರ ತಾಲ್ಲೂಕು ಇವರು ಫಿರ್ಯಾದುದಾರರಾದ ಶ್ರೀ ಶಿವಕುಮಾರ್, ಅಡ್ವೋಕೇಟ್, ರಾಜಾಜಿನಗರ, ಬೆಂಗಳೂರು ಇವರ ಮೂಲಕ ಶ್ರೀ ಲಾರೆನ್ಸ್ ಡಾಮ್ನಿಕ್ ಪಿಂಟೋ ಬಿನ್ ಲೇಟ್ ಲೋವಿಯನ್ ಪಿಂಟೋ, ನಂ.2132, 8ನೇ ಮುಖ್ಯರಸ್ತೆ, 'ಡಿ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು ಇವರ ಸ್ವಾಧೀನಾನುಭವದಲ್ಲಿರುವ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹಂದರಹಳ್ಳಿ ಗ್ರಾಮದ ನಿವೇಶನ ಸಂಖ್ಯೆ:76ನ್ನು ಶ್ರೀಮತಿ ಆರ್. ಜಯಲಕ್ಷ್ಮಿ ಕೋಂ. ಶ್ರೀ ಚನ್ನಗಂಗಯ್ಯ, ನಂ.41, 1ನೇ ಮುಖ್ಯರಸ್ತೆ, ಪಾಪಯ್ಯ ಗಾರ್ಡನ್, ಕೆ.ಹೆಚ್.ಬಿ. ಕಾಲೋನಿ, ಬೆಂಗಳೂರು-79ರಲ್ಲಿ ವಾಸವಾಗಿರುವ ಇವರು ಮತ್ತು ಇದೇ ಮೇಲ್ಕಂಡ ಸದರಿ ಲಾರೆನ್ಸ್ ಡಾಮ್ನಿಕ್ ಪಿಂಟೋರವರ ಮತ್ತೊಂದು ನಿವೇಶನ ಸಂಖ್ಯೆ:75ನ್ನು ಶ್ರೀ ಜಿ. ಸ್ವಾಮಿ ಬಿನ್ ದಿವಂಗತ ಶ್ರೀ ಗಂಗಪ್ಪ, ನಂ.19, ಅನಂತ ನಿಲಯ, 3ನೇ ಕ್ರಾಸ್, ಜಾರಕ ಬಂಡೆ ಕಾವಲ್, ಗಣೇಶ ಬ್ಲಾಕ್, ಮಹಾಲಕ್ಷ್ಮೀ ಬಡಾವಣೆ, ಬೆಂಗಳೂರು-96ರಲ್ಲಿ ವಾಸವಾಗಿರುವ ಇವರು ಶುದ್ಧ ಕ್ರಯಕ್ಕೆ ಖರೀದಿಸಿದ್ದು, ಮೇಲ್ಕಂಡ ಸದರಿ ನಿವೇಶನಗಳನ್ನು ನೋಂದಣಿ ಮಾಡಲು ಪ್ರತಿ ನಿವೇಶನಕ್ಕೆ ರೂ. 1,500/-ರಂತೆ ಒಟ್ಟು ಎರಡು ನಿವೇಶನಗಳ ನೋಂದಣಿಗೆ ಅಕ್ರಮ ಸಂಭಾವನೆಯಾಗಿ ರೂ. 3,000/-ಗಳನ್ನು ದಿನಾಂಕ: 23.10.2002ರಂದು ಪಡೆಯುತ್ತಿದ್ದಾಗ ಲೋಕಾಯುಕ್ತರು ಬೀಸಿದ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ, ಸದರಿಯವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ-7,13(1)(ಡಿ) ಮತ್ತು ಕಲಂ 13(2) ರಡಿಯಲ್ಲಿ ಕ್ರಮ ಜರುಗಿಸಲು ಅಭಿಯೋಜನಾ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು. ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ ಹಾಗೂ ಹಾಲಿ ಉಪ ನೋಂದಣಾಧಿಕಾರಿ, ಮಾಗಡಿ ಉಪ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಲಂಚಾರೋಪಕ್ಕೆ ಒಳಗಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಹಾಗೂ ಅವರ ವಿರುದ್ಧ ಗಂಭೀರವಾದ ಆಪಾದನೆ ಇರುವುದರಿಂದ ಆಪಾದಿತರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಬಹುದೆಂದು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ. 65 ಮುನೋಸೇ(2) 2003, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ ಮಾಗಡಿ ಉಪ ನೋಂದಣಿ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ಲಂಚ ನಿರೋದ ಕಾಯಿದೆ, 1988ರ ಕಲಂ 7,13(1)(ಡಿ) ಹಾಗೂ 13(2)ರಂತೆ ಶಿಕ್ಷಾರ್ಹ ಅಪರಾಧ ಎಸಗಿರುವುದರಿಂದ ಸದರಿಯವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮೇಲ್ಕಂಡ ಕಾಯ್ದೆಯ ಕಲಂ-19ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 837

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)